KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಡಿಸೆಂಬರ್ ೨೭, ೨೦೦೭ (ಪುಷ್ಯ ೬, ಶಕ ವರ್ಷ ೧೯೨೯) | ಸಂಚಿಕೆ ೫೧ |
| --- | --- | --- |

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ಅಧಿಸೂಚನೆ–1**

**ಸಂಖ್ಯೆ:ಯೋಇ 91 ಯೋವಿವಿ 2007 ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2007**

ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಅಧಿನಿಯಮ 1991 ಅಧ್ಯಾಯ–2ರ 3ನೇ (ಡಿ) ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇಲ್ಲಿಗೆ ಶ್ರೀ ಸಿ.ಎಸ್. ರಾಜು, ಕಾರ್ಯದರ್ಶಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರನ್ನು ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ ಹಾಗೂ ಇದೇ ಅಧಿನಿಯಮದ 3ನೇ ಪ್ರಕರಣದ ಉಪ ಪ್ರಕರಣ 3(4)ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸಿ.ಎಸ್. ರಾಜು ಕಾರ್ಯದರ್ಶಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರನ್ನು ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇಲ್ಲಿಯ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹೆಚ್ಚಿನ ಪ್ರಭಾರದಲ್ಲಿ ಇರಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್. ಮಹೇಶ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಅಧಿಸೂಚನೆ–2**

**ಸಂಖ್ಯೆ:ಯೋಇ 91 ಯೋವಿವಿ 2007 ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2007**

ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಅಧಿನಿಯಮ 1994 ಅಧ್ಯಾಯ–2ರ 3ನೇ (ಇ) ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ ಇಲ್ಲಿಗೆ ಶ್ರೀ ಎಂ.ಎಸ್. ಗೌಡರ್, ಕಾರ್ಯದರ್ಶಿ, ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗಾ ಇವರನ್ನು ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ ಹಾಗೂ ಇದೇ ಅಧಿನಿಯಮದ 3ನೇ ಪ್ರಕರಣದ ಉಪಪ್ರಕರಣ 3(4)ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಎಸ್. ಗೌಡರ್, ಕಾರ್ಯದರ್ಶಿ, ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗಾ ಇವರನ್ನು ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ ಇಲ್ಲಿಯ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹೆಚ್ಚಿನ ಪ್ರಭಾರದಲ್ಲಿ ಇರಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್ 1336
**ಎಂ.ಆರ್. ಮಹೇಶ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

ಅಧಿಸೂಚನೆ

ಸಂಖ್ಯೆ: ಸಂವ್ಯಶಾಇ 57 ರಾಶಾಪ್ರ 2007, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2007

The Karnataka Ayurvedic Naturopathy, Siddha, Unani and Yoga Practitioners Registration and Medical Practitioners Miscellaneous Provisions Act, 1961 (Karnataka Act No. 35 of 1961) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ರ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಆಯುರ್ವೇದ, ಪ್ರಕೃತಿ ಚಿಕಿತ್ಸೆ, ಸಿದ್ಧ, ಯುನಾನಿ ಮತ್ತು ಯೋಗ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961

### ಪ್ರಕರಣಗಳ ಅನುಕ್ರಮಣಿಕೆ

ಅಧ್ಯಾಯ -I

ಪ್ರಕರಣಗಳು

ಪ್ರಾರಂಭಿಕ



ಅಧ್ಯಾಯ–II

ವೈದ್ಯ ಪದ್ಧತಿಗಳು

29. ವೈದ್ಯವೃತ್ತಿ ನಿರತರ ಪಟ್ಟಿಯ ಪ್ರಕಟಣೆ
30. ನಿಯಮಗಳು
31. ವಿನಿಯಮಗಳು
32. ನಿಯಂತ್ರಣ
33. ನಿರಸನ ಮತ್ತು ತೊಂದರೆಗಳನ್ನು ನಿವಾರಿಸುವ ಅಧಿಕಾರ

**ಅಧ್ಯಾಯ –III**

**ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳು**

34. ಈ ಅಧಿನಿಯಮ ಅಥವಾ ಕೆಲವು ಕಾನೂನುಗಳ ಮೇರೆಗೆ ನೋಂದಾಯಿತರಾಗದ ವೈದ್ಯಕೀಯ ವೃತ್ತಿ ನಿರತರು ವೈದ್ಯ ವೃತ್ತಿಯಲ್ಲಿ ತೊಡಗದಿರುವುದು, ಇತ್ಯಾದಿ
35. ಈ ಅಧಿನಿಯಮ, ಮೊದಲಾದವುಗಳ ಮೇರೆಗೆ ನೋಂದಾಯಿತರಾಗದ ವೈದ್ಯಕೀಯ ವೃತ್ತಿ ನಿರತರು ಜನನ ಅಥವಾ ಮರಣ ಪ್ರಮಾಣ ಪತ್ರ, ಮುಂತಾದವುಗಳಿಗೆ ಸಹಿ ಮಾಡುವಂತಿಲ್ಲ
36. ದಂಡ

36ಎ. ಕಣ್ಣಿನ ಪೊರೆಯನ್ನು ತೆಗೆಯುವುದರ ನಿಷೇಧ

37. ನಕಲಿ ಪದವಿಗಳನ್ನು, ಡಿಪ್ಲೋಮಗಳನ್ನು ಅಥವಾ ಲೈಸೆನ್ಸ್ ಗಳನ್ನು, ಪ್ರದಾನ ಮಾಡುವುದು, ನೀಡುವುದು ಅಥವಾ ಒದಗಿಸುವುದು ಒಂದು ಅಪರಾಧ
38. ಅಧಿಕೃತವಾಗದ ಹೊರತು, ಯಾರೇ ವ್ಯಕ್ತಿಯ ಹೆಸರಿಗೆ ಯಾವುದೇ ಪದವಿ, ವಿವರಣೆ, ಮುಂತಾದವನ್ನು ಸೇರಿಸುವುದಕ್ಕೆ ನಿಷೇಧ
39. ಉಳಿಸುವಿಕೆ
40. ಈ ಅಧಿನಿಯಮದ ಮೇರೆಗಿನ ಅಪರಾಧಗಳನ್ನು ಅವಗಾಹನೆಗೆ ತೆಗೆದುಕೊಳ್ಳಲು ಮತ್ತು ಅಪರಾಧಗಳ ಅಧಿವಿಚಾರಣೆ ನಡೆಸಲು ಸಕ್ಷಮವಾದ ನ್ಯಾಯಾಲಯ
41. ಈ ಅಧಿನಿಯಮದ ಮೇರೆಗೆ ಕಾರ್ಯನಿರ್ವಹಿಸುವ ವ್ಯಕ್ತಿಗಳಿಗೆ ನಷ್ಟಭರ್ತಿ
42. ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿ.

**ಅನುಸೂಚಿ.**

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆಗಳು

**I**

**1962ರ ಅಧಿನಿಯಮ 9.–** ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ, ಆಯುರ್ವೇದ ಮತ್ತು ಯುನಾನಿ ಔಷಧ ಪದ್ಧತಿಗಳಲ್ಲಿ ವೈದ್ಯ ವೃತ್ತಿಯಲ್ಲಿ ತೊಡಗಿರುವುದನ್ನು ನಿಯಂತ್ರಿಸುವುದಕ್ಕೆ ಸಂಬಂಧಿಸಿದಂತೆ ಯಾವುದೇ ಕಾನೂನು ಇಲ್ಲ. ಸ್ಥಳೀಯ ಔಷಧ ಪದ್ಧತಿಗಳ ವೈದ್ಯ ವೃತ್ತಿ ನಿರತರು ಮತ್ತು ಸಂಘ ಸಂಸ್ಥೆಗಳಿಂದ ತಮಗೆ ಶಾಸನ ಪ್ರದತ್ತವಾದ ಅಂಗೀಕಾರ ಮುದ್ರೆ ನೀಡುವಂತೆ ಪದೇ ಪದೇ ಕೋರಿಕೆಗಳು ಬಂದಿವೆ. ಭಾರತ ಸರ್ಕಾರವು, 1955 ರಲ್ಲಿ ವೈದ್ಯರು, ಹಕೀಮರು ಮತ್ತು ಹೋಮಿಯೋಪತಿ ವೈದ್ಯರ ಶಿಕ್ಷಣಕ್ಕಾಗಿ ಮತ್ತು ವೃತ್ತಿ ನಿರತತೆಯ ವಿನಿಯಮಕ್ಕಾಗಿ ಏಕರೂಪದ ಗುಣಮಟ್ಟಗಳನ್ನು ರೂಪಿಸುವ ಬಗೆಗಿನ ಪ್ರಶ್ನೆಯನ್ನು ಅಧ್ಯಯನ ಮಾಡಿ ವರದಿ ಮಾಡುವುದಕ್ಕಾಗಿ ಶ್ರೀ ಡಿ.ಕೆ. ದವೆ, ಆರೋಗ್ಯ ಸಚಿವರು, ಸೌರಾಷ್ಟ್ರ ಸರ್ಕಾರ, ಇವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಲಾಯಿತು. ಸಮಿತಿಯು 1956ರ ಜನವರಿ ತಿಂಗಳಿನಲ್ಲಿ ರಾಜ್ಯ ಸರ್ಕಾರಗಳು ವಿನಿಯಮಿಸಬಹುದಾದ ಮಾದರಿ ಕರಡು ವಿಧೇಯಕದೊಂದಿಗೆ ಈ ಸಂಬಂಧವಾಗಿ ಶಿಫಾರಸು ಮಾಡಿ ಒಂದು ಮಧ್ಯಕಾಲೀನ ವರದಿಯನ್ನು ಭಾರತ ಸರ್ಕಾರಕ್ಕೆ ಸಲ್ಲಿಸಿತು. ಪ್ರಸಕ್ತ ವಿಧೇಯಕವನ್ನು ಮೇಲ್ಕಂಡ ಮಾದರಿ ಕರಡು ವಿಧೇಯಕದ ರೀತಿಯಲ್ಲಿ ಸಿದ್ಧಪಡಿಸಲಾಗಿದೆ. ಸ್ಥಳೀಯ ವೈದ್ಯ ಪದ್ಧತಿಯ ವೃತ್ತಿಯಲ್ಲಿ ತೊಡಗುವ ಬಗ್ಗೆ ವಿನಿಯಮಿಸುವುದು ಮತ್ತು ಈ ಔಷಧ ಪದ್ಧತಿಗಳ ವೈದ್ಯ ವೃತ್ತಿಯಲ್ಲಿ ತೊಡಗಿರುವ ವ್ಯಕ್ತಿಗಳ ನೋಂದಣಿಗಾಗಿ ಅವಕಾಶ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV – 2ಎ, ದಿನಾಂಕ 9 ನೇ ಏಪ್ರಿಲ್ 1960ರ ಸಂಖ್ಯೆ 348ರ ಪುಟ 25 – 26 ರಲ್ಲಿ ಪ್ರಕಟವಾಗಿದೆ.)

**II**

**1966ರ ತಿದ್ದುಪಡಿ ಮಾಡುವ ಅಧಿನಿಯಮ 9.–** ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ I ಮತ್ತು IIನೇ ಅಧ್ಯಾಯಗಳು, ಕರ್ನಾಟಕ ರಾಜ್ಯಪತ್ರದಲ್ಲಿ ಅಧಿನಿಯಮವು ಪ್ರಕಟಗೊಂಡ ದಿನಾಂಕದಂದು, ಎಂದರೆ, 1962ರ ಮಾರ್ಚ್ ಹದಿನೈದನೇ ದಿನಾಂಕದಂದು ಜಾರಿಗೆ ಬಂದಿವೆ. ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು

ರಚಿಸಬೇಕಾಗಿದ್ದುದರಿಂದಾಗಿ, ಮಂಡಲಿಯ ರಚನೆ ಹಾಗೂ ಅಧಿನಿಯಮದ 16 ಮತ್ತು 18 ನೇ ಪ್ರಕರಣಗಳ ಮೂಲಕ ಅಗತ್ಯಪಡಿಸಲಾದಂತೆ II ನೇ ಅಧ್ಯಾಯವು ಜಾರಿಗೆ ಬಂದ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗಾಗಿ ವೈದ್ಯ ವೃತ್ತಿನಿರತರನ್ನು ನೋಂದಾಯಿಸಬೇಕಾದ ಮತ್ತು ನೋಂದಣಿಗೆ ಅರ್ಹರಾಗಿಲ್ಲದ ವೈದ್ಯ ವೃತ್ತಿ ನಿರತರ ಪಟ್ಟಿಯನ್ನು ಸಿದ್ಧಪಡಿಸಬೇಕಾದ ರಿಜಿಸ್ಟ್ರಾರರ ನೇಮಕವು ಸಾಧ್ಯವಾಗಲಿಲ್ಲ. ಆದ್ದರಿಂದ, ವೈದ್ಯ ವೃತ್ತಿ ನಿರತರ ನೋಂದಣಿಗಾಗಿ ಮತ್ತು ನೋಂದಣಿಗೆ ಅರ್ಹರಲ್ಲದ ವೃತ್ತಿನಿರತರ ಪಟ್ಟಿಯನ್ನು ಸಿದ್ಧಪಡಿಸುವುದಕ್ಕಾಗಿ ರಿಜಿಸ್ಟ್ರಾರರ ನೇಮಕಾತಿಯ ದಿನಾಂಕದಿಂದ ಎರಡು ವರ್ಷಗಳ ಅವಧಿಗಾಗಿ ಉಪಬಂಧ ಕಲ್ಪಿಸುವುದಕ್ಕಾಗಿ ಮೂಲ ಅಧಿನಿಯಮಕ್ಕೆ ತಿದ್ದುಪಡಿ ತರಬೇಕೆಂದು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV- 2 ಎ, ದಿನಾಂಕ 29 ನೇ ಜನವರಿ 1966ರ ಸಂಖ್ಯೆ 18ರ ಪುಟ 4 ರಲ್ಲಿ ಪ್ರಕಟವಾಗಿದೆ.)

III

**1966ರ ತಿದ್ದುಪಡಿ ಮಾಡುವ ಅಧಿನಿಯಮ 32.–** ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ I ಮತ್ತು IIನೇ ಅಧ್ಯಾಯಗಳು, ಕರ್ನಾಟಕ ರಾಜ್ಯಪತ್ರದಲ್ಲಿ ಅಧಿನಿಯಮವು ಪ್ರಕಟಗೊಂಡ ಎಂದರೆ 1962ರ ಮಾರ್ಚ್ ಹದಿನೈದನೇ ದಿನಾಂಕದಂದು ಜಾರಿಗೆ ಬಂದಿವೆ. ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಬೇಕಾಗಿದ್ದುದರಿಂದಾಗಿ ಮಂಡಲಿಯ ರಚನೆ ಮತ್ತು ಅಧಿನಿಯಮದ 16 ಮತ್ತು 18 ನೇ ಪ್ರಕರಣಗಳು ಅಗತ್ಯಪಡಿಸಲಾದಂತೆ II ನೇ ಅಧ್ಯಾಯವು ಜಾರಿಗೆ ಬಂದ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗೆ ವೈದ್ಯ ವೃತ್ತಿ ನಿರತರನ್ನು ನೋಂದಾಯಿಸಬೇಕಾದ ಮತ್ತು ನೋಂದಣಿಗೆ ಅರ್ಹರಲ್ಲದ ವೈದ್ಯ ವೃತ್ತಿನಿರತರ ಪಟ್ಟಿಯನ್ನು ಸಿದ್ಧಪಡಿಸಬೇಕಾದ ರಿಜಿಸ್ಟ್ರಾರರ ನೇಮಕವು ಸಾಧ್ಯವಾಗಲಿಲ್ಲ. ಆದ್ದರಿಂದ ವೈದ್ಯ ವೃತ್ತಿ ನಿರತರ ನೋಂದಣಿಗಾಗಿ ಮತ್ತು ನೋಂದಣಿಗೆ ಅರ್ಹರಲ್ಲದ ವೃತ್ತಿ ನಿರತರ ಪಟ್ಟಿಯನ್ನು ಸಿದ್ಧಪಡಿಸುವುದಕ್ಕಾಗಿ ರಿಜಿಸ್ಟ್ರಾರರ ನೇಮಕಾತಿಯ ದಿನಾಂಕದಿಂದ ಎರಡು ವರ್ಷಗಳ ಅವಧಿಗಾಗಿ ಉಪಬಂಧ ಕಲ್ಪಿಸುವುದಕ್ಕಾಗಿ ಮೂಲ ಅಧಿನಿಯಮಕ್ಕೆ ತಿದ್ದುಪಡಿ ತರಬೇಕೆಂದು ಉದ್ದೇಶಿಸಲಾಗಿದೆ. ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV- 2 ಎ ದಿನಾಂಕ: 29 ನೇ ಜನವರಿ 1966ರ ಸಂಖ್ಯೆ 18ರ ಪುಟ 63 ರಲ್ಲಿ ಪ್ರಕಟವಾಗಿದೆ.)

IV

**1968ರ ತಿದ್ದುಪಡಿ ಮಾಡುವ ಅಧಿನಿಯಮ 3.–** ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961 (1962ರ ಕರ್ನಾಟಕ ಅಧಿನಿಯಮ 9) ರ 16ನೇ ಪ್ರಕರಣದ (2) ನೇ ಉಪ ಪ್ರಕರಣವು, 14ನೇ ಪ್ರಕರಣದ (1) ನೇ ಉಪ ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರರ ನೇಮಕದ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗೆ, ನಿಯಮಿಸಬಹುದಾದಂಥ ರುಜುವಾತನ್ನು ನೀಡುವ ಪ್ರತಿಯೊಬ್ಬನೂ ವೈದ್ಯ ವೃತ್ತಿನಿರತನೆಂದು ತನ್ನ ಹೆಸರನ್ನು ರಿಜಿಸ್ಟರಿನಲ್ಲಿ ನಮೂದಿಸಿಕೊಳ್ಳಲು ಹಕ್ಕುಳ್ಳವನಾಗುತ್ತಾನೆಂದು ಉಪಬಂಧ ಕಲ್ಪಿಸುತ್ತದೆ. 18ನೇ ಪ್ರಕರಣದ (2) ನೇ ಉಪಪ್ರಕರಣವು, 14 ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ರಿಜಿಸ್ಟ್ರಾರರ ನೇಮಕದ ದಿನಾಂಕದಿಂದ ವೈದ್ಯ ವೃತ್ತಿಯಲ್ಲಿ ತೊಡಗಿರುವವರ ಪಟ್ಟಿಯಲ್ಲಿ ತಮ್ಮ ಹೆಸರನ್ನು ನಮೂದಿಸಿಕೊಳ್ಳಲು ಎರಡು ವರ್ಷಗಳ ಕಾಲಾವಧಿಯನ್ನು ನಿರ್ದಿಷ್ಟಪಡಿಸಿದೆ. ಹಾಗೆಯೇ, 21ನೇ ಪ್ರಕರಣದ (1)ನೇ ಉಪ ಪ್ರಕರಣವು, 14ನೇ ಪ್ರಕರಣದ (1) ನೇ ಉಪ ಪ್ರಕರಣದ ಮೇರೆಗೆ ರಿಜಿಸ್ಟ್ರಾರರ ನೇಮಕಾತಿಯ ದಿನಾಂಕದಿಂದ ಎರಡು ವರ್ಷಗಳ ಕಾಲಾವಧಿಯನ್ನು ಅರ್ಹತಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ನಿರ್ದಿಷ್ಟಪಡಿಸುತ್ತದೆ. ನೋಂದಣಿಗಾಗಿ ಅವಕಾಶ ನೀಡಿದ ಕಾಲಾವಧಿಯು ಸಾಕಷ್ಟಿಲ್ಲವೆಂದು ಮತ್ತು ತಾವು ನೋಂದಾಯಿಸಿಕೊಳ್ಳಲು ಸಾಧ್ಯವಾಗುವಂತೆ ಮಾಡಲು, ನೀಡಲಾದ ಕಾಲಾವಧಿಯನ್ನು ವಿಸ್ತರಿಸಬೇಕೆಂದು ಮನವಿಗಳು ಬಂದವು. ನೋಂದಣಿಯು ಪೂರ್ಣಗೊಳ್ಳಲು ಮತ್ತು ಪಟ್ಟಿಯನ್ನು ತಯಾರಿಸಲು ಅನುಕೂಲ ಕಲ್ಪಿಸುವುದಕ್ಕಾಗಿ ಆರು ತಿಂಗಳ ಅವಧಿ ವಿಸ್ತರಣೆ ಅಗತ್ಯವೆಂದು ಪರಿಗಣಿಸಲಾಯಿತು. ಸಂಬಂಧಪಟ್ಟ ದಿನಾಂಕದಂದು, ನೋಂದಾಯಿಸಬೇಕಾದ ಮತ್ತು ಪಟ್ಟಿಯಲ್ಲಿ ಹೆಸರು ಸೇರಿಸಬೇಕಾದ ವ್ಯಕ್ತಿಗಳ ಕನಿಷ್ಠ ವಯೋಮಿತಿಯ ಬಗ್ಗೆ ಉಪಬಂಧ ಕಲ್ಪಿಸುವುದು ಸಹ ಅಗತ್ಯವೆಂದು ಪರಿಗಣಿಸಲಾಗಿದೆ. ವಿಷಯದ ತುರ್ತು ಸ್ವರೂಪವನ್ನು ಗಮನದಲ್ಲಿರಿಸಿಕೊಂಡು ಮತ್ತು ವಿಧಾನಮಂಡಲವು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ 1961ರ ನವೆಂಬರ್ 2ನೇ ದಿನಾಂಕದಂದು ಒಂದು ಅಧ್ಯಾದೇಶವನ್ನು ಹೊರಡಿಸಲಾಯಿತು.

ಅಧ್ಯಾದೇಶದ ಬದಲಾಗಿ ಈ ವಿಧೇಯಕವನ್ನು ಮಂಡಿಸಬೇಕಾಗಿದೆ.

(ಕರ್ನಾಟಕ ರಾಜ್ಯ ಪತ್ರದ (ವಿಶೇಷ ಸಂಚಿಕೆ) ಭಾಗ **IV**-2 ಎ, ದಿನಾಂಕ 2 ನೇ ಡಿಸೆಂಬರ್ 1967ರ ಸಂಖ್ಯೆ 269ರ ಪುಟ 4 ರಲ್ಲಿ ಪ್ರಕಟವಾಗಿದೆ.)

**V**

**1969ರ ತಿದ್ದುಪಡಿ ಮಾಡುವ ಅಧಿನಿಯಮ 8.–** ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 9) 3(3)ನೇ ಪ್ರಕರಣದ ಪರಂತುಕದ ಮೇರೆಗೆ ಸ್ಥಾಪಿತವಾದ ಮೊದಲ ಮಂಡಲಿಯ ಅವಧಿಯು ಮುಕ್ತಾಯಗೊಂಡಿದೆ. ವೈದ್ಯ ವೃತ್ತಿ ನಿರತರ ನೋಂದಣಿ ಕಾರ್ಯವು ಇನ್ನೂ ಪೂರ್ಣಗೊಂಡಿಲ್ಲದಿರುವುದರಿಂದಾಗಿ, ಇನ್ನೊಂದು ಮಂಡಲಿಯನ್ನು ರಚಿಸಲಾಗಲಿಲ್ಲ. ನೋಂದಣಿ ಕಾರ್ಯವನ್ನು ಆದಷ್ಟು ಬೇಗನೆ ಪೂರ್ಣಗೊಳಿಸುವ ಸಲುವಾಗಿ ಮೊದಲ ಮಂಡಲಿಯ ಅವಧಿಯನ್ನು ವಿಸ್ತರಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ. ಆದ್ದರಿಂದ ಈ ವಿಧೇಯಕ.

ಕೆಲವು ಇತರ ಪ್ರಾಸಂಗಿಕ ಮತ್ತು ಆನುಷಂಗಿಕ ತಿದ್ದುಪಡಿಯನ್ನು ಮಾಡಲು ಈ ಅವಕಾಶವನ್ನು ಉಪಯೋಗಿಸಿಕೊಳ್ಳಲಾಗಿದೆ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV –2 ಎ, ದಿನಾಂಕ 13ನೇ ಜನವರಿ 1969ರ ಸಂಖ್ಯೆ 8003ರ ಪುಟ 24ರಲ್ಲಿ ಪ್ರಕಟವಾಗಿದೆ.)

VI

**1972ರ ತಿದ್ದುಪಡಿ ಮಾಡುವ ಅಧಿನಿಯಮ 13.–** ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರಲ್ಲಿ ಪ್ರಸ್ತುತ ಜಾರಿಯಲ್ಲಿರುವ 5 ಮತ್ತು 30ನೇ ಪ್ರಕರಣಗಳ ಉಪಬಂಧಗಳ ಮೇರೆಗೆ ಅಂಚೆ ಮತಪತ್ರದ ಮೂಲಕ ಮತಚಲಾಯಿಸುವ ಸೌಲಭ್ಯಕ್ಕಾಗಿ ಉಪಬಂಧ ಕಲ್ಪಿಸಲು ಸಾಧ್ಯವಾಗಿಲ್ಲ. ರಾಜ್ಯದ ವಿವಿಧ ಭಾಗಗಳಲ್ಲಿ ವಾಸಿಸುವ ನೋಂದಾಯಿತ ವೈದ್ಯ ವೃತ್ತಿನಿರತರಿಗೆ ಅಂಚೆ ಮತಪತ್ರದ ಮೂಲಕ ಮತ ಚಲಾಯಿಸಲು ಸಾಧ್ಯವಾಗುವಂತೆ ಮಾಡಲು ಕೋರಿ ಸಾರ್ವಜನಿಕರಿಂದ ಅನೇಕ ಮನವಿ ಪತ್ರಗಳು ಬಂದಿವೆ. ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV –2 ಎ, ದಿನಾಂಕ 17ನೇ ಆಗಸ್ಟ್ 1972ರ ಸಂಖ್ಯೆ 328ರ ಪುಟ 3ರಲ್ಲಿ ಪ್ರಕಟವಾಗಿದೆ.)

**VII**

**1977ರ ತಿದ್ದುಪಡಿ ಮಾಡುವ ಅಧಿನಿಯಮ** 7.– ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ 3ನೇ ಪ್ರಕರಣದ ಮೇರೆಗೆ ರಚಿತವಾದ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ಮಂಡಲಿಯ ಅವಧಿಯು 1968ರ ಜೂನ್ 6ನೇ ದಿನಾಂಕದಂದು ಮುಕ್ತಾಯವಾಗಿದೆ. ಅಧಿನಿಯಮದ ಉಪಬಂಧಗಳ ಕೆಲವು ನ್ಯೂನತೆಗಳಿಂದಾಗಿ ಮತ್ತು ಮಂಡಲಿಯ ಸದಸ್ಯರನ್ನು ಆಯ್ಕೆ ಮಾಡುವಲ್ಲಿ ಉಂಟಾದ ಕೆಲವು ತೊಂದರೆಗಳ ಕಾರಣದಿಂದಾಗಿ ಆ ನಂತರ ಮಂಡಲಿಯನ್ನು ರಚಿಸಲು ಸಾಧ್ಯವಾಗಲಿಲ್ಲ. ಮಂಡಲಿಯ ಮರು ರಚನೆಗೆ ಸ್ವಲ್ಪ ಸಮಯ ಬೇಕಾಗಿರುವುದರಿಂದ, ಅದು ರಚಿತವಾಗುವವರೆಗೆ ಮಂಡಲಿಯ ಪ್ರಕಾರ್ಯಗಳನ್ನು ನಿರ್ವಹಿಸಲು ಒಬ್ಬ ಆಡಳಿತಗಾರನನ್ನು ನೇಮಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ. ಈ ಉದ್ದೇಶಕ್ಕಾಗಿ ಒಬ್ಬ ಆಡಳಿತಗಾರನ ನೇಮಕಕ್ಕಾಗಿ ಉಪಬಂಧ ಕಲ್ಪಿಸಲು ಅಧಿನಿಯಮಕ್ಕೆ ತಿದ್ದುಪಡಿ ತರುವುದು ಅಗತ್ಯವಾಗಿದೆ. ಪ್ರಕೃತಿ ಚಿಕಿತ್ಸೆಯನ್ನು ಅಧಿನಿಯಮದ ಪರಿಮಿತಿಯೊಳಗೆ ತರಲು ಮತ್ತು ಮಂಡಲಿಯ ಆದಾಯವನ್ನು ಹೆಚ್ಚಿಸುವುದಕ್ಕಾಗಿ ವೈದ್ಯಕೀಯ ವೃತ್ತಿ ನಿರತರ ನೋಂದಣಿ ಫೀಜನ್ನು ಮತ್ತು ನೋಂದಣಿಯ ನವೀಕರಣ ಫೀಜನ್ನು ಹೆಚ್ಚಿಸಲು ಇತರ ಕೆಲವು ತಿದ್ದುಪಡಿಗಳು ಸಹ ಅಗತ್ಯವೆಂದು ಪರಿಗಣಿಸಲಾಗಿದೆ.

ತಿದ್ದುಪಡಿಗಳನ್ನು ತ್ವರಿತವಾಗಿ ಪರಿಣಾಮಗೊಳಿಸುವ ದೃಷ್ಟಿಯಿಂದ ಹಾಗೂ ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ (ತಿದ್ದುಪಡಿ) ಅಧ್ಯಾದೇಶ, 1977 ನ್ನು ಪ್ರಖ್ಯಾಪಿಸಲಾಯಿತು.

ಸದರಿ ಅಧ್ಯಾದೇಶಕ್ಕೆ ಬದಲಾಗಿ ವಿಧೇಯಕವನ್ನು ಮಂಡಿಸಬೇಕಾಗಿದೆ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2 ಎ ದಿನಾಂಕ 28 ನೇ ಮಾರ್ಚ್ 1977ರ ಸಂಖ್ಯೆ 240ರ ಪುಟ 4ರಲ್ಲಿ ಪ್ರಕಟವಾಗಿದೆ.)

**VIII**

**1981ರ ತಿದ್ದುಪಡಿ ಮಾಡುವ ಅಧಿನಿಯಮ 46. –** 16ನೇ ಪ್ರಕರಣದ ಅಡಿಯಲ್ಲಿ ನೋಂದಾಯಿತ ವೈದ್ಯಕೀಯ ವೃತ್ತಿನಿರತರ ಹೆಸರನ್ನು ಸೇರಿಸಲು ಇರುವ ರಿಜಿಸ್ಟರಿಗೆ ಮತ್ತು 18ನೇ ಪ್ರಕರಣದ ಅಡಿಯಲ್ಲಿ ಇಡಲಾದ ವೈದ್ಯಕೀಯ ವೃತಿನಿರತರ ಪಟ್ಟಿಗೆ ಸಂಬಂಧಿಸಿದಂತೆ ನಿರ್ದಿಷ್ಟಪಡಿಸಿದ ಅವಧಿಯು 1961ರ ಆಗಸ್ಟ್ 11ನೇ ದಿನಾಂಕದಂದು

ಮುಕ್ತಾಯವಾಗಿದೆ. ಅನೇಕ ವೈದ್ಯಕೀಯ ವೃತ್ತಿನಿರತರು ತಮ್ಮ ಅಜ್ಞಾನದಿಂದಾಗಿ ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ಹೆಸರನ್ನು ನೋಂದಾಯಿಸಿಕೊಳ್ಳಲು ಸಾಧ್ಯವಾಗಲಿಲ್ಲವೆಂದು ಮತ್ತು ಕಾಲಾವಧಿಯನ್ನು ವಿಸ್ತರಿಸಬೇಕೆಂದು ಕೋರಿಕೊಂಡ ಅನೇಕ ಮನವಿಗಳನ್ನು ಗಮನದಲ್ಲಿರಿಸಿಕೊಂಡು ಕಾಲಮಿತಿಯನ್ನು 1981ರ ಡಿಸೆಂಬರ್ 31ನೇ ದಿನಾಂಕದವರೆಗೆ ವಿಸ್ತರಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ. ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV- 2 ಎ ದಿನಾಂಕ 7 ನೇ ಮಾರ್ಚ್ 1981ರ ಸಂಖ್ಯೆ 162ರ ಪುಟ 3ರಲ್ಲಿ ಪ್ರಕಟವಾಗಿದೆ.)

**IX**

**1991ರ ತಿದ್ದುಪಡಿ ಮಾಡುವ ಅಧಿನಿಯಮ 38.–** 300 ರೂ.ಗಳ ಶುಲ್ಕ ಸಂದಾಯ ಮಾಡಿ ಆಜೀವ ನೋಂದಾಯಿತರಾಗಲು ಮತ್ತು ಪ್ರಸ್ತುತ ಇರುವ ನೋಂದಾಯಿತ ವೈದ್ಯವೃತ್ತಿ ನಿರತರಿಗೆ ಸಂಬಂಧಿಸಿದಂತೆ, ನವೀಕರಣದ ಶುಲ್ಕದ ಬದಲಿಗೆ ಆಜೀವ ನೋಂದಾಯಿತರಾಗಲು 200 ರೂ.ಗಳ ಶುಲ್ಕ ಸಂದಾಯ ಮಾಡಲು ಅಥವಾ ರಿಜಿಸ್ಟರಿನಲ್ಲಿ ಅಥವಾ ಪಟ್ಟಿಯಲ್ಲಿ ತಮ್ಮ ಹೆಸರನ್ನು ಮುಂದುವರಿಸಲು 20 ರೂ.ಗಳ ನವೀಕರಣ ಶುಲ್ಕವನ್ನು ಸಂದಾಯ ಮಾಡುವುದಕ್ಕಾಗಿ ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ ಕೆಲವು ಉಪಬಂಧಗಳಿಗೆ ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ. ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2 ಎ, ದಿನಾಂಕ 30ನೇ ಸೆಪ್ಟೆಂಬರ್ 1991ರ ಸಂಖ್ಯೆ 620ರ ಪುಟ 98ರಲ್ಲಿ ಪ್ರಕಟವಾಗಿದೆ.)

X

**1992ರ ತಿದ್ದುಪಡಿ ಮಾಡುವ ಅಧಿನಿಯಮ 11. –** ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ನ್ನು (1962ರ ಕರ್ನಾಟಕ ಅಧಿನಿಯಮ 9) ತಿದ್ದುಪಡಿ ಮಾಡುವ ಮೂಲಕ, ಸಿದ್ಧ ಔಷಧ ಪದ್ಧತಿಯ, ಪ್ರಕೃತಿ ಚಿಕಿತ್ಸೆ ಔಷಧ ಪದ್ಧತಿಯ ಮತ್ತು ಯೋಗ ಚಿಕಿತ್ಸಾ ಪದ್ಧತಿಯ ವೈದ್ಯ ವೃತ್ತಿ ನಿರತರ ನೋಂದಣಿಗಾಗಿ ಅವಕಾಶ ಕಲ್ಪಿಸುವುದು ಮತ್ತು ಅನುಸೂಚಿಯಲ್ಲಿ ವಿದ್ಯಾರ್ಹತೆಗಳನ್ನು ನಿರ್ದಿಷ್ಟಪಡಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ. ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2 ಎ ದಿನಾಂಕ 26 ನೇ ಫೆಬ್ರವರಿ 1992ರ ಸಂಖ್ಯೆ 121ರ ಪುಟ 398 ರಲ್ಲಿ ಪ್ರಕಟವಾಗಿದೆ.)

## 1962ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 9

(1962ರ ಮಾರ್ಚ್ ಹದಿನೈದನೆಯ ದಿನಾಂಕದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)

**[1][ಕರ್ನಾಟಕ][1] [2][ಆಯುರ್ವೇದ, ಪ್ರಕೃತಿ ಚಿಕಿತ್ಸೆ, ಸಿದ್ಧ, ಯುನಾನಿ ಮತ್ತು ಯೋಗ][2] ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961**

**(1962ರ ಮಾರ್ಚ್ ನಾಲ್ಕನೇ ದಿನಾಂಕದಂದು ರಾಷ್ಟ್ರಾಧ್ಯಕ್ಷರ ಅನುಮೋದನೆಯನ್ನು ಪಡೆಯಲಾಗಿದೆ.)**

(1966ರ 9 ಮತ್ತು 32, 1968ರ 3, 1969ರ 8, 1972ರ 13, 1977 ರ 7, 1981ರ 46, 1991ರ 38 ಮತ್ತು 1992ರ 11ನೇ ಕರ್ನಾಟಕ ಅಧಿನಿಯಮಗಳ ಮೂಲಕ ತಿದ್ದುಪಡಿಯಾದಂತೆ.)

**[2][ಆಯುರ್ವೇದ, ಪ್ರಕೃತಿ ಚಿಕಿತ್ಸೆ, ಸಿದ್ಧ, ಯುನಾನಿ ಮತ್ತು ಯೋಗ][2] ವೈದ್ಯ ಪದ್ಧತಿಗಳ ಅಧ್ಯಯನವನ್ನು ಪ್ರೋತ್ಸಾಹಿಸುವ ಮತ್ತು ಅಂಥ ಪದ್ಧತಿಗಳನ್ನು ಪ್ರಚಾರಕ್ಕೆ ತರುವ ದೃಷ್ಟಿಯಿಂದ ವೈದ್ಯ ವೃತ್ತಿ ನಿರತರ ಅರ್ಹತೆಗಳನ್ನು ವಿನಿಯಮಿಸುವ ಮತ್ತು ಅವರ ನೋಂದಣಿಗೆ ಅವಕಾಶ ಕಲ್ಪಿಸುವ ಮತ್ತು ಸಾಮಾನ್ಯವಾಗಿ, [1][ಕರ್ನಾಟಕ ರಾಜ್ಯ][1] ದ ವೈದ್ಯಕೀಯ ವೃತ್ತಿ ನಿರತರಿಗೆ ಸಂಬಂಧಪಟ್ಟ ಕಾನೂನನ್ನು ತಿದ್ದುಪಡಿ ಮಾಡುವ ಒಂದು ಅಧಿನಿಯಮ.**

[2][ಆಯುರ್ವೇದ, ಪ್ರಕೃತಿ ಚಿಕಿತ್ಸೆ, ಸಿದ್ಧ, ಯುನಾನಿ ಮತ್ತು ಯೋಗ][2] ವೈದ್ಯ ಪದ್ಧತಿಗಳ ಅಧ್ಯಯನವನ್ನು ಪ್ರೋತ್ಸಾಹಿಸುವ ಮತ್ತು ಅಂಥ ಪದ್ಧತಿಗಳನ್ನು ಪ್ರಚಾರಕ್ಕೆ ತರುವ ದೃಷ್ಟಿಯಿಂದ ಆ ವೈದ್ಯ ವೃತ್ತಿ ನಿರತರ ಅರ್ಹತೆಗಳನ್ನು ವಿನಿಯಮಿಸುವುದು ಮತ್ತು ನೋಂದಣಿಗೆ ಅವಕಾಶ ಕಲ್ಪಿಸುವುದು ಮತ್ತು ಸಮಗ್ರ ಪದ್ಧತಿಯ ವೈದ್ಯ ವೃತ್ತಿ ನಿರತರ ನೋಂದಣಿಗೆ ಅವಕಾಶ ಕಲ್ಪಿಸುವುದು ಮತ್ತು ಸಾಮಾನ್ಯವಾಗಿ, ವೈದ್ಯಕೀಯ ವೃತ್ತಿ ನಿರತರಿಗೆ ಸಂಬಂಧಪಟ್ಟ ಕಾನೂನನ್ನು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದ ಮೂಲಕ ಈ ಮುಂದಿನಂತೆ ಅಧಿನಿಯಮಿತವಾಗಲಿ:–

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ–I
## ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–**(1) ಈ ಅಧಿನಿಯಮವನ್ನು [1][ಕರ್ನಾಟಕ][1] [2][ಆಯುರ್ವೇದ, ಪ್ರಕೃತಿ ಚಿಕಿತ್ಸೆ, ಸಿದ್ಧ, ಯುನಾನಿ ಮತ್ತು ಯೋಗ]] ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು, ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ಅನ್ವಯವಾಗತಕ್ಕದ್ದು.

(3) (ಎ) ಈ ಅಧಿನಿಯಮದ I ಮತ್ತು IIನೇ ಅಧ್ಯಾಯಗಳು, ಇಡೀ [1][ಕರ್ನಾಟಕ ರಾಜ್ಯ][1] ದಲ್ಲಿ ಕೂಡಲೇ ಜಾರಿಗೆ ಬರತಕ್ಕದ್ದು ; ಮತ್ತು

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

2. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) IIIನೇ ಅಧ್ಯಾಯವು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸುವಂಥ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು.

1. ಅಧಿನಿಯಮದ IIIನೇ ಅಧ್ಯಾಯವು ಅಧಿಸೂಚನೆಯ ಮೂಲಕ 1.2.1973ರಂದು ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

**2. ಪರಿಭಾಷೆಗಳು.–** ಈ ಅಧಿನಿಯಮದ I ಮತ್ತು II ನೇ ಅಧ್ಯಾಯಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

[1][(ಎ) "ತಿದ್ದುಪಡಿ ಅಧಿನಿಯಮ" ಎಂದರೆ, ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ (ತಿದ್ದುಪಡಿ) ಅಧಿನಿಯಮ, 1992.][1]

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(ಎಎ)][1] "ಆಯುರ್ವೇದ ಔಷಧ ಪದ್ಧತಿ" ಅಥವಾ "ಆಯುರ್ವೇದ ಪದ್ಧತಿ" ಎಂದರೆ, ಕಾಲಕಾಲಕ್ಕೆ ಮಂಡಲಿಯು ನಿರ್ಧರಿಸಬಹುದಾದಂಥ ಆಧುನಿಕ ಪ್ರಗತಿಗಳನ್ನು ಹೊಂದಿರುವ ಅಥವಾ ಹೊಂದಿರದ ಆಯುರ್ವೇದ ಔಷಧ ಪದ್ಧತಿ;

1. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಪುನರ್ ಅಕ್ಷರ ನೀಡಲಾಗಿದೆ.

(ಬಿ) " ಮಂಡಲಿ " ಎಂದರೆ, 3 ನೇ ಪ್ರಕರಣದ ಮೇರೆಗೆ ಸ್ಥಾಪಿತವಾದ ಮತ್ತು ರಚಿತವಾದ ಮಂಡಲಿ;

(ಸಿ) "ಅಧ್ಯಾಯ" ಎಂದರೆ, ಈ ಅಧಿನಿಯಮದ ಒಂದು ಅಧ್ಯಾಯ;

(ಡಿ) "ಇನ್ಸ್‌ಪೆಕ್ಟರ್" ಎಂದರೆ, 23 ನೇ ಪ್ರಕರಣದ ಮೇರೆಗೆ ಮಂಡಲಿಯಿಂದ ನೇಮಕಗೊಂಡ ಒಬ್ಬ ಇನ್ಸ್‌ಪೆಕ್ಟರ್;

(ಇ) "ಸಮಗ್ರ ಔಷಧ ಪದ್ಧತಿ" ಅಥವಾ "ಸಮಗ್ರಪದ್ಧತಿ" ಎಂದರೆ, ಸ್ಥಳೀಯ ವೈದ್ಯ ಪದ್ಧತಿ ಮತ್ತು ಆಧುನಿಕ ವೈದ್ಯ ಪದ್ಧತಿಯನ್ನು ಜೊತೆ ಜೊತೆಯಾಗಿ ಮಾಡುವ ಅಧ್ಯಯನ, ತರಬೇತಿ ಮತ್ತು ವೈದ್ಯ ವೃತ್ತಿಯಲ್ಲಿ ತೊಡಗುವುದು;

***ವಿವರಣೆ:–*** ಈ ಅಧಿನಿಯಮದಲ್ಲಿ "ಸ್ಥಳೀಯ ವೈದ್ಯ ಪದ್ಧತಿ" ಎಂದರೆ, ಒಂದು ಅಥವಾ ಎಲ್ಲ [1][ಐದು][1] ವೈದ್ಯ ಪದ್ಧತಿಗಳು ಎಂದರೆ [1][ಆಯುರ್ವೇದ, ಪ್ರಕೃತಿ ಚಿಕಿತ್ಸೆ, ಸಿದ್ಧ, ಯುನಾನಿ ಮತ್ತು ಯೋಗ][1] ಮತ್ತು "ಆಧುನಿಕ ವೈದ್ಯ ಪದ್ಧತಿ " ಎಂದರೆ ಶಸ್ತ್ರ ಚಿಕಿತ್ಸೆ ಮತ್ತು ಪ್ರಸವ ಶಾಸ್ತ್ರಗಳನ್ನು ಒಳಗೊಂಡ ಆಧುನಿಕ ವೈಜ್ಞಾನಿಕ ವೈದ್ಯ ಪದ್ಧತಿ;

1. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎಫ್) "ಪಟ್ಟಿ" ಎಂದರೆ, 18ನೇ ಪ್ರಕರಣದ ಮೇರೆಗೆ ಸಿದ್ಧಪಡಿಸಲಾದ ಮತ್ತು ಇಡಲಾದ ವೈದ್ಯ ವೃತ್ತಿನಿರತರ ಒಂದು ಪಟ್ಟಿ ;

[1][(ಎಫ್‌ಎಫ್) "ಪ್ರಕೃತಿ ಚಿಕಿತ್ಸೆ ವೈದ್ಯ ಪದ್ಧತಿ" ಅಥವಾ "ಪ್ರಕೃತಿ ಚಿಕಿತ್ಸೆ" ಎಂದರೆ, ಕಾಲಕಾಲಕ್ಕೆ ಮಂಡಲಿಯು ನಿರ್ಧರಿಸಬಹುದಾದಂಥ ಆಧುನಿಕ ಪ್ರಗತಿಗಳನ್ನು ಹೊಂದಿರುವ ಅಥವಾ ಹೊಂದಿರದ ಪ್ರಕೃತಿ ಚಿಕಿತ್ಸೆ ವೈದ್ಯ ಪದ್ಧತಿ.][1]

1. 1977ರ ಅಧಿನಿಯಮ 7ರ ಮೂಲಕ 5.3.1977ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಜಿ) "ಅಧಿಸೂಚನೆ" ಎಂದರೆ, ರಾಜ್ಯಪತ್ರದಲ್ಲಿ ಪ್ರಕಟವಾದ ಒಂದು ಅಧಿಸೂಚನೆ;

(ಎಚ್) "ವೈದ್ಯ ವೃತ್ತಿ ನಿರತ" ಎಂದರೆ, ಯಾವುದೇ ವೈದ್ಯ ಪದ್ಧತಿಯನ್ನು ತನ್ನ ಮುಖ್ಯ ವೃತ್ತಿಯನ್ನಾಗಿ ಹೊಂದಿರುವ ಒಬ್ಬ ವ್ಯಕ್ತಿ;

(ಐ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಜೆ) "ಅಧ್ಯಕ್ಷ" ಎಂದರೆ, ಮಂಡಲಿಯ ಅಧ್ಯಕ್ಷ;

(ಕೆ) "ಅರ್ಹತಾ ಪರೀಕ್ಷೆ" ಎಂದರೆ, ಈ ಅಧಿನಿಯಮದ ಮೇರೆಗೆ ನೋಂದಣಿಯ ಹಕ್ಕನ್ನು ಪ್ರದಾನ ಮಾಡಲು, ಪದವಿ ಅಥವಾ ಡಿಪ್ಲೊಮವನ್ನು ನೀಡುವ ಉದ್ದೇಶಕ್ಕಾಗಿ ನಡೆಸುವ ಪರೀಕ್ಷೆ;

(ಎಲ್) "ರಿಜಿಸ್ಟರ್" ಎಂದರೆ, 15ನೇ ಪ್ರಕರಣದ ಮೇರೆಗೆ ನಿರ್ವಹಿಸಲಾಗುವ ವೈದ್ಯ ವೃತ್ತಿ ನಿರತರ ರಿಜಿಸ್ಟರ್;

(ಎಂ) "ನೋಂದಾಯಿತ ವೈದ್ಯ ವೃತ್ತಿ ನಿರತ" ಎಂದರೆ, ಈ ಅಧಿನಿಯಮದ ಮೇರೆಗೆ ಪ್ರಸ್ತುತ, ರಿಜಿಸ್ಟರಿನಲ್ಲಿ ಹೆಸರು ನಮೂದಾಗಿರುವ ವೈದ್ಯ ವೃತ್ತಿನಿರತ;

(ಎನ್) "ರಿಜಿಸ್ಟ್ರಾರ್" ಎಂದರೆ, 14ನೇ ಪ್ರಕರಣದ ಮೇರೆಗೆ ನೇಮಕಗೊಂಡ ರಿಜಿಸ್ಟ್ರಾರ್;

(ಒ) " ವಿನಿಯಮಗಳು "ಎಂದರೆ, 31ನೇ ಪ್ರಕರಣದ ಮೇರೆಗೆ ರಚಿತವಾದ ವಿನಿಯಮಗಳು;

(ಪಿ) " ನಿಯಮಗಳು "ಎಂದರೆ, 30ನೇ ಪ್ರಕರಣದ ಮೇರೆಗೆ ರಚಿತವಾದ ನಿಯಮಗಳು;

[1][(ಪಿಪಿ) "ಸಿದ್ಧ ವೈದ್ಯ ಪದ್ಧತಿ" ಅಥವಾ "ಸಿದ್ಧ ಪದ್ಧತಿ" ಎಂದರೆ, ಮಂಡಲಿಯು ಕಾಲಕಾಲಕ್ಕೆ ನಿರ್ಧರಿಸಬಹುದಾದ ಆಧುನಿಕ ಪ್ರಗತಿಗಳನ್ನು ಹೊಂದಿರುವ ಅಥವಾ ಹೊಂದಿರದ ಸಿದ್ಧ ವೈದ್ಯ ಪದ್ಧತಿ][1].

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಕ್ಯೂ) " ವೈದ್ಯ ಪದ್ಧತಿ " ಎಂದರೆ, ಆಯುರ್ವೇದ ವೈದ್ಯ ಪದ್ಧತಿ ಮತ್ತು ಸಮಗ್ರ ವೈದ್ಯ ಪದ್ಧತಿ [1][ ಪ್ರಕೃತಿ ಚಿಕಿತ್ಸಾ ಪದ್ಧತಿ, ಸಿದ್ಧ ವೈದ್ಯ ಪದ್ಧತಿ, ಯುನಾನಿ ವೈದ್ಯ ಪದ್ಧತಿ, ಯೋಗ ಚಿಕಿತ್ಸಾ ಪದ್ಧತಿ][1] ; ಮತ್ತು

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಆರ್) "ಯುನಾನಿ ವೈದ್ಯ ಪದ್ಧತಿ" ಅಥವಾ "ಯುನಾನಿ ಪದ್ಧತಿ" ಎಂದರೆ, ಮಂಡಲಿಯು ಕಾಲಕಾಲಕ್ಕೆ ನಿರ್ಧರಿಸಬಹುದಾದ ಆಧುನಿಕ ಪ್ರಗತಿಗಳನ್ನು ಹೊಂದಿರುವ ಅಥವಾ ಹೊಂದಿರದ ಯುನಾನಿ ವೈದ್ಯ ಪದ್ಧತಿ;

[1][(ಎಸ್) "ಯೋಗ ಚಿಕಿತ್ಸಾ ಪದ್ಧತಿ" ಅಥವಾ "ಯೋಗ ಪದ್ಧತಿ" ಎಂದರೆ, ಕಾಲಕಾಲಕ್ಕೆ ಮಂಡಲಿಯು ನಿರ್ಧರಿಸಬಹುದಾದ ಆಧುನಿಕ ಪ್ರಗತಿಗಳನ್ನು ಹೊಂದಿರುವ ಅಥವಾ ಹೊಂದಿರದ ಯೋಗ ಚಿಕಿತ್ಸಾ ಪದ್ಧತಿ][1].

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ–II
## [1][XXX][1] ವೈದ್ಯ ಪದ್ಧತಿಗಳು

**3. ಮಂಡಲಿಯ ಸ್ಥಾಪನೆ, ರಚನೆ ಮತ್ತು ನಿಗಮನ.–** (1) ರಾಜ್ಯಸರ್ಕಾರವು, ಅಧಿಸೂಚನೆಯ ಮೂಲಕ, ಕಾರ್ಯ ಸಾಧ್ಯವಾದಷ್ಟು ಬೇಗನೆ, [2][ಆರು][2] ವೈದ್ಯ ಪದ್ಧತಿಗಳಿಗಾಗಿ ಸಂಯುಕ್ತವಾಗಿ ಒಂದು ಮಂಡಲಿಯನ್ನು ಸ್ಥಾಪಿಸತಕ್ಕದ್ದು.

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಈ ಪ್ರಕರಣದ ಮೇರೆಗೆ ಸ್ಥಾಪಿತವಾದ ಮಂಡಲಿಯನ್ನು ಸರ್ಕಾರವು ನಿರ್ದೇಶಿಸಬಹುದಾದಂಥ ಹೆಸರಿನಿಂದ ಕರೆಯಬಹುದು ಮತ್ತು ಅದು ಶಾಶ್ವತ ಉತ್ತಾರಾಧಿಕಾರವನ್ನು ಹೊಂದಿರುವ ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು ಅಧಿಕಾರವನ್ನು ಮತ್ತು ಒಂದು ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು. ಸ್ವತ್ತನ್ನು ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೇ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರ ಹೊಂದಿರತಕ್ಕದ್ದು ಮತ್ತು ತನ್ನ ನಿಗಮಿತ ಹೆಸರಿನಲ್ಲಿ ದಾವೆ ಹೂಡಬಹುದು ಅಥವಾ ದಾವೆಗೆ ಒಳಗಾಗಬಹುದು.

(3) (1) ನೇ ಉಪ ಪ್ರಕರಣದ ಮೇರೆಗೆ ಸ್ಥಾಪಿತವಾದ ಮಂಡಲಿಯು ಈ ಮುಂದಿನ ರೀತಿಯಲ್ಲಿ ನೇಮಕ ಹೊಂದತಕ್ಕ [1][ಹತ್ತೊಂಬತ್ತು][1] ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

[1][(ಎ) ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದ ಹತ್ತು ಸದಸ್ಯರು, ಅವರ ಪೈಕಿ ಒಬ್ಬರು ಭಾರತೀಯ ಔಷಧ ಪದ್ಧತಿಯ ನಿರ್ದೇಶಕರಾಗಿರತಕ್ಕದ್ದು;][1]

(ಬಿ) ನೋಂದಾಯಿತ ವೈದ್ಯ ವೃತ್ತಿ ನಿರತರು ತಮ್ಮ ಪೈಕಿಯಿಂದ ಆಯ್ಕೆ ಮಾಡುವ [1][ಒಂಬತ್ತು][1] ಸದಸ್ಯರು :

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಮೊದಲು ರಚಿತವಾದ ಮಂಡಲಿಯ ಸಂದರ್ಭದಲ್ಲಿ (ಬಿ) ಖಂಡದ ಮೇರೆಗೆ ಆಯ್ಕೆ ಮಾಡಬೇಕಾದ ಸದಸ್ಯರು, ರಿಜಿಸ್ಟರಿನಲ್ಲಿ ಅವರ ಹೆಸರುಗಳನ್ನು ನಮೂದಿಸಲು ಅರ್ಹರೆಂದು ರಾಜ್ಯ ಸರ್ಕಾರವು ಅಭಿಪ್ರಾಯಪಡುವ, ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದ ವ್ಯಕ್ತಿಗಳಾಗಿರತಕ್ಕದ್ದು.

(4) (3)ನೇ ಉಪ ಪ್ರಕರಣದ (ಬಿ) ಖಂಡದ ಮೇರೆಗೆ ಆಯ್ಕೆಯಾದ ಸದಸ್ಯರ ಸ್ಥಾನಗಳನ್ನು, ರಿಜಿಸ್ಟರಿನಲ್ಲಿರುವ ಸದಸ್ಯರ ಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ವಿವಿಧ ವೈದ್ಯ ಪದ್ಧತಿಗಳ ನೋಂದಾಯಿತ ವೈದ್ಯ ವೃತ್ತಿ ನಿರತರಲ್ಲಿ ವಿಭಾಗ ಮಾಡತಕ್ಕದ್ದು:

ಪರಂತು, ಸದರಿ ಪ್ರಮಾಣವನ್ನು ನಿರ್ಧರಿಸುವಾಗ, ಅರ್ಧ ಅಥವಾ ಅದಕ್ಕೂ ಕಡಿಮೆ ಪ್ರಮಾಣವನ್ನು ಕಡೆಗಣಿಸತಕ್ಕದ್ದು ಮತ್ತು ಅರ್ಧಕ್ಕಿಂತ ಹೆಚ್ಚಿನ ಪ್ರಮಾಣವನ್ನು ಒಂದು ಎಂದು ಗಣಿಸತಕ್ಕದ್ದು :

ಮತ್ತೂ ಪರಂತು, ಯಾವುದೇ ವೈದ್ಯ ಪದ್ಧತಿಯ ನೋಂದಾಯಿತ ವೃತ್ತಿ ನಿರತರನ್ನು ಪ್ರತಿನಿಧಿಸುವ ಸದಸ್ಯರ ಸಂಖ್ಯೆಯು, ಯಾವುದೇ ಕಾಲದಲ್ಲಿ ಎರಡಕ್ಕಿಂತ ಕಡಿಮೆ ಇರತಕ್ಕದ್ದಲ್ಲ:

ಅಲ್ಲದೆ ಪರಂತು, (3)ನೇ ಉಪ ಪ್ರಕರಣದ ಪರಂತುಕದ ಉದ್ದೇಶಗಳಿಗಾಗಿ, ರಾಜ್ಯ ಸರ್ಕಾರವು, ರಿಜಿಸ್ಟರಿನಲ್ಲಿ ನೋಂದಾಯಿಸಲು ಅರ್ಹರಾದ ವೈದ್ಯ ವೃತ್ತಿ ನಿರತರ ಪೈಕಿ, ತಾನು ಸೂಕ್ತವೆಂದು ಭಾವಿಸಬಹುದಾದಂಥ ಪ್ರಮಾಣದಲ್ಲಿ, ಅಂಥ ಪ್ರತಿಯೊಂದು ಪದ್ಧತಿಗಳ ವೈದ್ಯ ವೃತ್ತಿಗರನ್ನು ನಾಮ ನಿರ್ದೇಶಿಸತಕ್ಕದ್ದು.

(5) ಮಂಡಲಿಯ ಅಧ್ಯಕ್ಷನನ್ನು, ನಿಯಮಿಸಬಹುದಾದಂಥ ರೀತಿಯಲ್ಲಿ ಸದಸ್ಯರ ಪೈಕಿಯಿಂದ ಆಯ್ಕೆ ಮಾಡತಕ್ಕದ್ದು:

ಪರಂತು, ಮೊದಲು ರಚಿತವಾದ ಮಂಡಲಿಯ ಸಂದರ್ಭದಲ್ಲಿ ಅಧ್ಯಕ್ಷನನ್ನು ರಾಜ್ಯ ಸರ್ಕಾರವು ನೇಮಕ ಮಾಡತಕ್ಕದ್ದು.

4. **ಚುನಾವಣೆ ನಡೆಯದಿದ್ದಾಗ ಸದಸ್ಯರ ನಾಮನಿರ್ದೇಶನ.–** 3ನೇ ಪ್ರಕರಣದ ಮೇರೆಗೆ ಯಾರೇ ಸದಸ್ಯರು ಚುನಾಯಿತರಾಗದಿರುವಲ್ಲಿ, ರಾಜ್ಯ ಸರ್ಕಾರವು, ತಾನು ಸೂಕ್ತವೆಂದು ಭಾವಿಸಬಹುದಾದಂಥ ನೋಂದಾಯಿತ ವೈದ್ಯ ವೃತ್ತಿ ನಿರತರನ್ನು ನಾಮ ನಿರ್ದೇಶಿಸಬಹುದು ಮತ್ತು ಹಾಗೆ ನಾಮ ನಿರ್ದೇಶಿತರಾದ ವೈದ್ಯ ವೃತ್ತಿ ನಿರತರನ್ನು ಈ ಅಧ್ಯಾಯದ ಉದ್ದೇಶಕ್ಕಾಗಿ 3ನೇ ಪ್ರಕರಣದ ಮೇರೆಗೆ ಯುಕ್ತವಾಗಿ ಚುನಾಯಿತರಾಗಿರುವುದಾಗಿ ಭಾವಿಸತಕ್ಕದ್ದು.

5. **ಸದಸ್ಯರ ಚುನಾವಣೆ.–** (1) 3ನೇ ಪ್ರಕರಣದ (3)ನೇ ಉಪ ಪ್ರಕರಣದ (ಬಿ) ಖಂಡದ ಮೇರೆಗೆ ಮಂಡಲಿಯ ಸದಸ್ಯರಾಗಲು ಹಕ್ಕುಳ್ಳ ವೈದ್ಯ ವೃತ್ತಿ ನಿರತರ ಚುನಾವಣೆಯನ್ನು, ನಿಯಮಿಸಬಹುದಾದಂಥ ರೀತಿಯಲ್ಲಿ [1][XXX][1] ನಡೆಸತಕ್ಕದ್ದು.

1. 1972ರ ಅಧಿನಿಯಮ 13ರ ಮೂಲಕ 30.12.1972ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) 3ನೇ ಪ್ರಕರಣದ (3)ನೇ ಉಪ ಪ್ರಕರಣದ (ಬಿ) ಖಂಡದ ಮೇರೆಗೆ ಚುನಾವಣೆಯನ್ನು, ಮತದಾನದ ಹಂಚಿಕೆ ಪದ್ಧತಿಗನುಸಾರವಾಗಿ ನಡೆಸತಕ್ಕದ್ದು.

***ವಿವರಣೆ:–*** ಮತದಾನದ ಹಂಚಿಕೆ ಪದ್ಧತಿ ಎಂದರೆ, ಪ್ರತಿಯೊಬ್ಬ ಸದಸ್ಯನಿಗೂ, ಭರ್ತಿ ಮಾಡಬೇಕಾದ ಸ್ಥಾನಗಳ ಸಂಖ್ಯೆ ಎಷ್ಟಿದೆಯೋ ಅಷ್ಟು ಮತ ನೀಡಲು ಹಕ್ಕುಳ್ಳ ಮತದಾನದ ಪದ್ಧತಿ:

ಪರಂತು, ಯಾರೇ ಮತದಾರನು ಯಾರೇ ಒಬ್ಬ ಅಭ್ಯರ್ಥಿಗೆ ಒಂದಕ್ಕಿಂತ ಹೆಚ್ಚಿನ ಮತವನ್ನು ನೀಡತಕ್ಕದ್ದಲ್ಲ:

ಮತ್ತೂ ಪರಂತು, ತಾನು ಮತ ಚಲಾಯಿಸಲು ಹಕ್ಕುಳ್ಳ ಎಲ್ಲ ಮತಗಳನ್ನು ಮತದಾರನು ದಾಖಲಿಸಿದ ಹೊರತು, ಯಾವುದೇ ಮತಪತ್ರವನ್ನು ಸಿಂಧುವೆಂದು ಭಾವಿಸತಕ್ಕದ್ದಲ್ಲ.

6. **ಪದಾವಧಿ.–** (1) ಈ ಅಧ್ಯಾಯದ ಮೂಲಕ ಅನ್ಯಥಾ ಉಪಬಂಧಿಸಿರುವುದನ್ನುಳಿದು, ಚುನಾಯಿತರಾದ ಮತ್ತು ನಾಮನಿರ್ದೇಶಿತರಾದ ಸದಸ್ಯರ ಪದಾವಧಿಯು, 3ನೇ ಪ್ರಕರಣದ (3)ನೇ ಉಪ ಪ್ರಕರಣದ ಮೇರೆಗೆ ಸದಸ್ಯರು ಚುನಾಯಿತರಾದ ತರುವಾಯ ನಡೆದ ಮಂಡಲಿಯ ಮೊದಲ ಸಭೆಯ ದಿನಾಂಕದಿಂದ ಪ್ರಾರಂಭವಾಗುವ ಐದು ವರ್ಷಗಳ ಅವಧಿಯಾಗಿರತಕ್ಕದ್ದು:

ಪರಂತು, ಈ ಅಧ್ಯಾಯವು ಜಾರಿಗೆ ಬಂದ ನಿಕಟ ತರುವಾಯ ರಚಿತವಾದ ಮಂಡಲಿಗೆ ನೇಮಕಗೊಂಡ ಸದಸ್ಯರ [1][ಮತ್ತು 3ನೇ ಪ್ರಕರಣದ (3) ನೇ ಉಪ ಪ್ರಕರಣದ ಮೇರೆಗೆ ಮೊದಲ ಬಾರಿಗೆ ಚುನಾಯಿತರಾದ ಮತ್ತು ನಾಮನಿರ್ದೇಶಿತರಾದ ಸದಸ್ಯರ][1] ಪದಾವಧಿಯು, ಅಂಥ ಮಂಡಲಿಯು ಮೊದಲ ಸಭೆಯನ್ನು ನಡೆಸಿದ ದಿನಾಂಕದಿಂದ [2][ನಾಲ್ಕು ವರ್ಷಗಳ][2] ಅವಧಿಯಾಗಿರತಕ್ಕದ್ದು.

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1969ರ ಅಧಿನಿಯಮ 8 ರ ಮೂಲಕ 15.3.1962 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(2) ಸದಸ್ಯರ ಪದಾವಧಿಯು ಮುಕ್ತಾಯವಾದಲ್ಲಿ ಮತ್ತು ಯಾವುದೇ ಕಾರಣಕ್ಕಾಗಿ ಹೊಸ ಮಂಡಲಿಯ ರಚನೆಯಾಗಿರದಿದ್ದಲ್ಲಿ ರಾಜ್ಯ ಸರ್ಕಾರವು, ಆದೇಶದ ಮೂಲಕ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಗಾಗಿ ಅಂಥ ಮಂಡಲಿಗೆ ಒಬ್ಬ ಆಡಳಿತಗಾರನನ್ನು ನೇಮಕ ಮಾಡಬಹುದು. ಅವನು, ಈ ಅಧಿನಿಯಮ ಅಥವಾ ಯಾವುದೇ ಕಾನೂನಿನ ಮೂಲಕ ಅಥವಾ ಅದರಡಿಯಲ್ಲಿ ಮಂಡಲಿಗೆ ಪ್ರದತ್ತವಾದ ಮತ್ತು ವಿಧಿಸಲಾದ ಎಲ್ಲ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಎಲ್ಲ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.][1]

1. 1977ರ ಅಧಿನಿಯಮ 7ರ ಮೂಲಕ 15.03.1962ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಹೊರ ಹೋಗುವ ಸದಸ್ಯನು, ಮರು ನಾಮ ನಿರ್ದೇಶನಕ್ಕೆ ಅಥವಾ ಮರು ಚುನಾವಣೆಗೆ ಅರ್ಹನಾಗಿರತಕ್ಕದ್ದು.

(4) ಯಾರೇ ಸದಸ್ಯನು, ಯಾವುದೇ ಕಾಲದಲ್ಲಿ ಅಧ್ಯಕ್ಷರನ್ನು ಸಂಬೋಧಿಸಿ, ಪತ್ರ ಬರೆದು ತನ್ನ ಹುದ್ದೆಗೆ ರಾಜೀನಾಮೆ ಸಲ್ಲಿಸಬಹುದು.

7. **ಖಾಲಿ ಸ್ಥಾನಗಳು.–** ಮಂಡಲಿಯ ಸದಸ್ಯನ ಹುದ್ದೆಯು, ಅವನ ಹುದ್ದೆಯ ಅವಧಿಯ ಮುಕ್ತಾಯಕ್ಕೆ ಮುಂಚೆ ಮರಣದ, ರಾಜಿನಾಮೆಯ, ತೆಗೆದುಹಾಕುವಿಕೆಯ ಅಥವಾ ಅಂಥ ಸದಸ್ಯನ ಅಂಗವಿಕಲತೆಯ ಕಾರಣದಿಂದ ತೆರವಾದಾಗ, ಆ ಖಾಲಿ ಸ್ಥಾನವನ್ನು 3 ನೇ ಪ್ರಕರಣದ ಉಪಬಂಧಗಳಿಗನುಸಾರವಾಗಿ ಆಯ್ಕೆ ಅಥವಾ ಸಂದರ್ಭಾನುಸಾರ, ನಾಮ ನಿರ್ದೇಶನದ ಮೂಲಕ ಭರ್ತಿ ಮಾಡತಕ್ಕದ್ದು. ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಾಮ ನಿರ್ದೇಶಿತನಾದ ಅಥವಾ ಚುನಾಯಿತನಾದ ಯಾರೇ ವ್ಯಕ್ತಿಯು, 6 ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಖಾಲಿ ಸ್ಥಾನವು ಉಂಟಾಗಿಲ್ಲದಿದ್ದರೆ ಹೇಗೋ ಹಾಗೆ,

ಯಾವ ಸದಸ್ಯನ ಸ್ಥಾನಕ್ಕೆ ತಾನು ನಾಮ ನಿರ್ದೇಶಿತನಾಗಿರುವನೋ ಅಥವಾ ಚುನಾಯಿತನಾಗಿರುವನೋ ಆ ಸದಸ್ಯನು ಪದಧಾರಣ ಮಾಡಬಹುದಾಗಿದ್ದ ಉಳಿದ ಅವಧಿಯವರೆಗೆ ಮಾತ್ರ ಪದಧಾರಣ ಮಾಡತಕ್ಕದ್ದು.

8. **ವ್ಯವಹರಣೆಗಳ ಮಾನ್ಯತೆ.–** (1) ಮಂಡಲಿಯ ಸದಸ್ಯನಾಗಿ ಅಥವಾ ಸಭೆಯ ಅಧ್ಯಕ್ಷನಾಗಿ ಅಥವಾ ಅಧ್ಯಕ್ಷ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವ ಯಾರೇ ವ್ಯಕ್ತಿಯ ಚುನಾವಣೆಗೆ ಅಥವಾ ನಾಮ ನಿರ್ದೇಶನದಲ್ಲಿನ ಯಾವುದೇ ಅನರ್ಹತೆ ಅಥವಾ ದೋಷವು, ಅಂಥ ವ್ಯಕ್ತಿಯು ಭಾಗಿಯಾಗಿರುವ ಮಂಡಲಿಯ ಯಾವುದೇ ಕೃತ್ಯ ಅಥವಾ ವ್ಯವಹರಣೆಯನ್ನು ನಿರರ್ಥಕಗೊಳಿಸುವುದೆಂದು ಭಾವಿಸತಕ್ಕದ್ದಲ್ಲ.

(2) ಮಂಡಲಿಯಲ್ಲಿ ಯಾವುದೇ ಖಾಲಿಸ್ಥಾನ ಇರುವ ಅಥವಾ ಮಂಡಲಿಯ ರಚನೆಯಲ್ಲಿ ಯಾವುದೇ ದೋಷ ಇರುವ ಕಾರಣದಿಂದಾಗಿ ಮಾತ್ರವೇ, ಮಂಡಲಿಯು ನಿರ್ವಹಿಸಿದ ಯಾವುದೇ ಕೃತ್ಯವನ್ನು ಪ್ರಶ್ನಿಸತಕ್ಕದ್ದಲ್ಲ.

9. **ಅನರ್ಹತೆಗಳು.–** ಒಬ್ಬ ವ್ಯಕ್ತಿಯು,–

(ಎ) ನೈತಿಕ ಅಧಃಪತನವನ್ನು ಒಳಗೊಳ್ಳುವ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಶಿಕ್ಷೆಗೆ ಗುರಿಯಾಗಿದ್ದರೆ, ಮತ್ತು ಮೂರು ತಿಂಗಳಿಗೂ ಮೀರಿದ ಅವಧಿಯ ಕಾರಾವಾಸದ ಶಿಕ್ಷೆಯಿಂದ ದಂಡಿತನಾಗಿದ್ದರೆ, ಈ ಬಗ್ಗೆ ಆದೇಶ ಹೊರಡಿಸಲು ಅಧಿಕಾರ ಹೊಂದಿರುವ, ರಾಜ್ಯ ಸರ್ಕಾರವು ಅಂಥ ಶಿಕ್ಷೆಯಿಂದಾಗಿ ಉದ್ಭವಿಸುವ ಅನರ್ಹತೆಯಿಂದ ಅವನನ್ನು ಆದೇಶದ ಮೂಲಕ ಮುಕ್ತಗೊಳಿಸಲಾದ ಹೊರತು, ತದನಂತರದಲ್ಲಿ ಅಂಥ ಶಿಕ್ಷೆಯನ್ನು ವಿಪರ್ಯಯಗೊಳಿಸಿಲ್ಲದಿದ್ದರೆ, ರದ್ದುಗೊಳಿಸಿಲ್ಲದಿದ್ದರೆ ಅಥವಾ ಮಾಫಿ ಮಾಡಿಲ್ಲದಿದ್ದರೆ,–

(ಬಿ) ಅವನು ಅವಿಮುಕ್ತ ದಿವಾಳಿಯಾಗಿದ್ದರೆ;

(ಸಿ) ಅವನು ಅಸ್ವಸ್ಥಚಿತ್ತದವನಾಗಿದ್ದು ಸಕ್ಷಮ ನ್ಯಾಯಾಲಯದಿಂದ ಹಾಗೆಂದು ಘೋಷಿತನಾಗಿದ್ದರೆ;

(ಡಿ) ಅವನು ಮಂಡಲಿಯ ಪೂರ್ಣಾವಧಿಯ ಅಧಿಕಾರಿ ಅಥವಾ ನೌಕರನಾಗಿದ್ದರೆ

– ಮಂಡಲಿಯ ಸದಸ್ಯನಾಗಿ ಆಯ್ಕೆಯಾಗಲು ಮತ್ತು ಸದಸ್ಯನಾಗಲು ಅನರ್ಹನಾಗತಕ್ಕದ್ದು.

10. **ಸದಸ್ಯನಾಗಿ ಮುಂದುವರಿಯಲು ಅಸಮರ್ಥತೆಗಳು.–** ಯಾರೇ ಸದಸ್ಯನು, ಅವನು ನಾಮ ನಿರ್ದೇಶಿತನಾದ ಅಥವಾ ಚುನಾಯಿತನಾದ ಅವಧಿಯಲ್ಲಿ,–

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ಸಾಕಷ್ಟು ಕಾರಣವಿಲ್ಲದೆ, ಮಂಡಲಿಯ ಮೂರು ನಿರಂತರ ಸಾಮಾನ್ಯ ಸಭೆಗಳಿಗೆ ಗೈರುಹಾಜರಾದರೆ; ಅಥವಾ

(ಬಿ) 3ನೇ ಪ್ರಕರಣದ (3) ನೇ ಉಪ ಪ್ರಕರಣದ (ಬಿ) ಖಂಡದ ಮೇರೆಗೆ ಚುನಾಯಿತನಾದ ಸದಸ್ಯನ ಸಂದರ್ಭದಲ್ಲಿ, ಅವನು ನೋಂದಾಯಿತ ವೈದ್ಯ ವೃತ್ತಿಗನಾಗಿರುವುದು ನಿಂತು ಹೋದರೆ; ಅಥವಾ

(ಸಿ) 9ನೇ ಪ್ರಕರಣದಲ್ಲಿ ಹೇಳಲಾದ ಯಾವುವೇ ಅನರ್ಹತೆಗಳಿಗೊಳಪಟ್ಟರೆ

– ರಾಜ್ಯ ಸರ್ಕಾರವು, ಅವನ ಸ್ಥಾನವು ತೆರವಾಗಿರುವುದಾಗಿ ಘೋಷಿಸತಕ್ಕದ್ದು.

11. **ಮಂಡಲಿಯ ಸಭೆಯ ಸಮಯ ಮತ್ತು ಸ್ಥಳ.–** ಮಂಡಲಿಯು, ಅಂಥ ಸಮಯದಲ್ಲಿ ಮತ್ತು ಸ್ಥಳದಲ್ಲಿ ಸಭೆ ಸೇರತಕ್ಕದ್ದು ಮತ್ತು ಮಂಡಲಿಯ ಪ್ರತಿಯೊಂದು ಸಭೆಯನ್ನು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ರೀತಿಯಲ್ಲಿ ಕರೆಯತಕ್ಕದ್ದು:

ಪರಂತು, ಅಂಥ ವಿನಿಯಮಗಳನ್ನು ರಚಿಸುವವರೆಗೆ, ಅಧ್ಯಕ್ಷನು ಮಂಡಲಿಯ ಸಭೆಯನ್ನು ನಡೆಸಲು ತಾನು ಸೂಕ್ತವೆಂದು ಭಾವಿಸುವಂಥ ಸಮಯವನ್ನು ಮತ್ತು ಸ್ಥಳವನ್ನು ಪ್ರತಿಯೊಬ್ಬ ಸದಸ್ಯನಿಗೆ ಪತ್ರ ಬರೆಯುವ ಮೂಲಕ ತಿಳಿಸುವುದು ಕಾನೂನು ಸಮ್ಮತವಾಗಿರತಕ್ಕದ್ದು.

12. **ಮಂಡಲಿಯ ಸಭೆಗಳ ಕಾರ್ಯ ವಿಧಾನ.–**(1) ಅಧ್ಯಕ್ಷನು, ಮಂಡಲಿಯ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಅಧ್ಯಕ್ಷನ ಗೈರುಹಾಜರಿಯಲ್ಲಿ ಹಾಜರಿರುವ ಸದಸ್ಯರು ತಮ್ಮಲ್ಲಿ ಒಬ್ಬನನ್ನು ಅಧ್ಯಕ್ಷತೆ ವಹಿಸಲು ಆಯ್ಕೆ ಮಾಡತಕ್ಕದ್ದು.

(2) ಮಂಡಲಿಯ ಸಭೆಯಲ್ಲಿ ಬರುವ ಎಲ್ಲ ಪ್ರಶ್ನೆಗಳನ್ನು, ಸಭೆಯಲ್ಲಿ ಹಾಜರಿರುವ ಸದಸ್ಯರ ಬಹುಮತಗಳ ಮೂಲಕ ನಿರ್ಧರಿಸತಕ್ಕದ್ದು. ಏಳು ಜನ ಸದಸ್ಯರು ಮಂಡಲಿಯ ಕೋರಂ ಆಗಿರತಕ್ಕದ್ದು.

(3) ಮಂಡಲಿಯ ಪ್ರತಿಯೊಂದು ಸಭೆಯಲ್ಲಿ, ತತ್ಕಾಲದಲ್ಲಿ ಅಧ್ಯಕ್ಷನಾಗಿರುವವನು ಮಂಡಲಿಯ ಸದಸ್ಯನಾಗಿ ತನ್ನ ಮತ ಚಲಾಯಿಸುವುದರ ಜೊತೆಗೆ, ಸಮಾನ ಮತಗಳು ಬಿದ್ದ ಸಂದರ್ಭದಲ್ಲಿ ಎರಡನೆಯ ಅಥವಾ ನಿರ್ಣಾಯಕ ಮತವನ್ನು ಚಲಾಯಿಸತಕ್ಕದ್ದು.

13. **ಮಂಡಲಿಯ ಇತರ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** ಮಂಡಲಿಯು, ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

14. **ರಿಜಿಸ್ಟ್ರಾರ್ ಮತ್ತು ಇತರ ಅಧಿಕಾರಿಗಳು ಮತ್ತು ನೌಕರರು.–**(1) ಮಂಡಲಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು ರಿಜಿಸ್ಟ್ರಾರನನ್ನು ನೇಮಕಮಾಡತಕ್ಕದ್ದು. ರಿಜಿಸ್ಟ್ರಾರನು, ನಿಯಮಿಸಬಹುದಾದಂಥ ಸಂಬಳ ಮತ್ತು

ಭತ್ಯೆಗಳನ್ನು ಪಡೆಯತಕ್ಕದ್ದು ಮತ್ತು ಅಂಥ ಸೇವಾ ಷರತ್ತುಗಳಿಗೊಳಪಡತಕ್ಕದ್ದು. ಮಂಡಲಿಯು ಅವರಿಗೆ ಕಾಲಕಾಲಕ್ಕೆ ರಜೆಯನ್ನು ಮಂಜೂರು ಮಾಡಬಹುದು ಮತ್ತು ಅವರ ಸ್ಥಾನದಲ್ಲಿ ಕಾರ್ಯ ನಿರ್ವಹಿಸಲು ಒಬ್ಬ ವ್ಯಕ್ತಿಯನ್ನು ನೇಮಿಸಬಹುದು. ರಿಜಿಸ್ಟ್ರಾರನ ಕಾರ್ಯ ನಿರ್ವಹಿಸಲು ಯುಕ್ತವಾಗಿ ನೇಮಕಗೊಂಡ ಯಾರೇ ವ್ಯಕ್ತಿಯನ್ನು, ಈ ಅಧಿನಿಯಮದ ಎಲ್ಲ ಉದ್ದೇಶಗಳಿಗಾಗಿ ರಿಜಿಸ್ಟ್ರಾರನೆಂದೇ ಭಾವಿಸತಕ್ಕದ್ದು:

ಪರಂತು, ರಿಜಿಸ್ಟ್ರಾರನಿಗೆ ಮಂಜೂರು ಮಾಡುವ ರಜೆಯ ಅವಧಿಯು ಒಂದು ತಿಂಗಳಿಗಿಂತ ಹೆಚ್ಚಿನದಲ್ಲದ್ದಾಗಿದ್ದರೆ ಅಂಥ ರಜೆಯನ್ನು ಅಧ್ಯಕ್ಷನು ಮಂಜೂರು ಮಾಡಬಹುದು.

(2) ಮಂಡಲಿಯು, ಈ ಅಧಿನಿಯಮದ ಉದ್ದೇಶಗಳಿಗಾಗಿ ಅವಶ್ಯವಿರಬಹುದಾದಂಥ ಇತರ ಅಧಿಕಾರಿಗಳು ಮತ್ತು ನೌಕರರನ್ನು ನೇಮಿಸಬಹುದು:

ಪರಂತು, ಅಂಥ ಅಧಿಕಾರಿಗಳು ಮತ್ತು ನೌಕರರ ಸಂಖ್ಯೆ ಮತ್ತು ಪದನಾಮಗಳು ಮತ್ತು ಅವರ ಸಂಬಳ ಮತ್ತು ಭತ್ಯೆಗಳು ರಾಜ್ಯ ಸರ್ಕಾರದ ಪೂರ್ವಾನುಮೋದನೆಗೆ ಒಳಪಟ್ಟಿರತಕ್ಕದ್ದು.

(3) ಈ ಅಧಿನಿಯಮದ ಮೇರೆಗೆ ನೇಮಕರಾದ ರಿಜಿಸ್ಟ್ರಾರ್ ಮತ್ತು ಇತರ ಯಾರೇ ಅಧಿಕಾರಿ ಮತ್ತು ನೌಕರರನ್ನು ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥ ವ್ಯಾಪ್ತಿಯಲ್ಲಿ ಲೋಕ ನೌಕರರೆಂದು ಭಾವಿಸತಕ್ಕದ್ದು.

**15. ರಿಜಿಸ್ಟ್ರಾರನ ಕರ್ತವ್ಯಗಳು.**–(1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು ಮತ್ತು ಮಂಡಲಿಯ ಯಾವುವೇ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೊಳಪಟ್ಟು,–

(i) ರಿಜಿಸ್ಟರ್ ಮತ್ತು ಪಟ್ಟಿಯನ್ನು ಇಡುವುದು;

(ii) ಮಂಡಲಿಯ ಸಭೆಗಳಿಗೆ ಹಾಜರಾಗುವುದು; ಮತ್ತು

(iii) ಮಂಡಲಿಯ ಕಾರ್ಯದರ್ಶಿಯ ಸಾಮಾನ್ಯ ಕರ್ತವ್ಯಗಳನ್ನು ನಿರ್ವಹಿಸುವುದು

– ರಿಜಿಸ್ಟ್ರಾರನ ಕರ್ತವ್ಯವಾಗಿರತಕ್ಕದ್ದು.

(2) ರಿಜಿಸ್ಟರು, ನಿರ್ದಿಷ್ಟಪಡಿಸಬಹುದಾದಂಥ ನಮೂನೆಯಲ್ಲಿರತಕ್ಕದ್ದು. ರಿಜಿಸ್ಟ್ರಾರನು, ರಿಜಿಸ್ಟರನ್ನು ಪ್ರತ್ಯೇಕ ಭಾಗಗಳಲ್ಲಿ ನಿರ್ವಹಿಸತಕ್ಕದ್ದು. ಆ ಪ್ರತಿಯೊಂದು ಭಾಗವು, ಔಷಧದ [1][ಆರು][1] ಪದ್ಧತಿಗಳಲ್ಲಿ ವೈದ್ಯ ವೃತ್ತಿಯಲ್ಲಿ ತೊಡಗಲು ಅರ್ಹರಾದ ವೈದ್ಯ ವೃತ್ತಿನಿರತರ ಹೆಸರುಗಳನ್ನು ಪ್ರತ್ಯೇಕವಾಗಿ ಒಳಗೊಂಡಿರತಕ್ಕದ್ದು. ರಿಜಿಸ್ಟರಿನ ಪ್ರತಿಯೊಂದು ಭಾಗವು, ಅಂಥ ಅರ್ಹತೆಗಳನ್ನು ಗಳಿಸಲಾದ ದಿನಾಂಕವನ್ನು ಹಾಗೂ ಪ್ರತಿಯೊಬ್ಬ ನೋಂದಾಯಿತ ವೈದ್ಯ ವೃತ್ತಿ ನಿರತನ ಹೆಸರು, ವಾಸಸ್ಥಳ ಮತ್ತು ಅರ್ಹತೆಗಳನ್ನು ಒಳಗೊಂಡಿರತಕ್ಕದ್ದು.

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ರಿಜಿಸ್ಟ್ರಾರನು, ಸಾಧ್ಯವಾದಷ್ಟು ಮಟ್ಟಿಗೆ ರಿಜಿಸ್ಟರನ್ನು ಸರಿಯಾಗಿ ಇಡತಕ್ಕದ್ದು ಮತ್ತು ಕಾಲಕಾಲಕ್ಕೆ ವೈದ್ಯ ವೃತ್ತಿ ನಿರತನ ವಿಳಾಸ ಅಥವಾ ಅರ್ಹತೆಗಳಲ್ಲಿ ಆದ ಯಾವುದೇ ಮುಖ್ಯ ಬದಲಾವಣೆಯನ್ನು ಅದರಲ್ಲಿ ನಮೂದಿಸತಕ್ಕದ್ದು. ಮೃತನಾದ ಅಥವಾ 16ನೇ ಪ್ರಕರಣದ (3)ನೇ ಉಪ ಪ್ರಕರಣದ ಮೇರೆಗೆ ರಿಜಿಸ್ಟರಿನಿಂದ ತೆಗೆದುಹಾಕಬೇಕೆಂದು ನಿರ್ದೇಶಿಸಲಾದ ನೋಂದಾಯಿತ ವೈದ್ಯ ವೃತ್ತಿ ನಿರತರ ಹೆಸರುಗಳನ್ನು ರಿಜಿಸ್ಟರಿನಿಂದ ತೆಗೆದುಹಾಕತಕ್ಕದ್ದು.

(4) ನಿಯಮಿಸಬಹುದಾದಂಥ ಫೀಜನ್ನು ಸಂದಾಯ ಮಾಡಿದ ಹೊರತು ಹೆಚ್ಚಿನ ಅರ್ಹತೆಗೆ ಸಂಬಂಧಪಟ್ಟಂತೆ ನಮೂದುಗಳಲ್ಲಿ ಮಾಡಬೇಕಾದ ಯಾವುದೇ ಬದಲಾವಣೆಯನ್ನು ಮಾಡತಕ್ಕದ್ದಲ್ಲವೆಂದು ರಾಜ್ಯ ಸರ್ಕಾರವು ನಿರ್ದೇಶಿಸಬಹುದು.

**16. ನೋಂದಣಿ ಮತ್ತು ರಿಜಿಸ್ಟರಿನಿಂದ ತೆಗೆದುಹಾಕುವುದು.**– (1) ಅರ್ಹತಾ ಪರೀಕ್ಷೆಯಲ್ಲಿ ಉತ್ತೀರ್ಣನಾದ ಪ್ರತಿಯೊಬ್ಬ ವ್ಯಕ್ತಿಯು, [1][ಈ ಅಧಿನಿಯಮದ ಮೇರೆಗೆ ಆಜೀವ ನೋಂದಣಿ ಮಾಡಿಸುವುದಕ್ಕಾಗಿ ಮೂರು ನೂರು ರೂಪಾಯಿಗಳ ಶುಲ್ಕದೊಂದಿಗೆ][1] ಯಾವ ದಿನಾಂಕಗಳಂದು ತನಗೆ ಅರ್ಹತೆಗಳನ್ನು ನೀಡಲಾಯಿತು ಎಂಬ ಬಗ್ಗೆ ಸರಿಯಾದ ವಿವರಣೆ ನೀಡಿ ರಿಜಿಸ್ಟ್ರಾರನಿಗೆ ಅರ್ಜಿ ಸಲ್ಲಿಸಬಹುದು ಮತ್ತು ತನ್ನ ಡಿಗ್ರಿ, ಡಿಪ್ಲೊಮ ಅಥವಾ ಲೈಸೆನ್ಸನ್ನು ಹಾಜರುಪಡಿಸತಕ್ಕದ್ದು. ಅರ್ಜಿದಾರನು ನೋಂದಣಿಗೆ ಹಕ್ಕುಳ್ಳವನೆಂದು ರಿಜಿಸ್ಟ್ರಾರನಿಗೆ ಮನದಟ್ಟಾದರೆ, ರಿಜಿಸ್ಟರಿನಲ್ಲಿ ಅವನ ಹೆಸರನ್ನು ನಮೂದಿಸಬಹುದು:

1. 1991ರ ಅಧಿನಿಯಮ 38ರ ಮೂಲಕ 10.12.1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ರಿಜಿಸ್ಟ್ರಾರನು, [1][ಬೆಳಗಾಂ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಮುಂಬೈ ವೈದ್ಯಕೀಯ ವೃತ್ತಿನಿರತರ ಅಧಿನಿಯಮ, 1938ರ (1938ರ ಮುಂಬೈ ಅಧಿನಿಯಮ XXVI) ಮೇರೆಗೆ ಅಥವಾ [1][ಗುಲ್ಬರ್ಗಾ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ವೈದ್ಯಕೀಯ ಅಧಿನಿಯಮ 1312 ಫಸಲಿ (1312 ಫಸಲಿ ಇದರ ಹೈದರಾಬಾದ್ ಅಧಿನಿಯಮ I)ಇದರ ಮೇರೆಗೆ ನೋಂದಣಿಯಾದ ವೈದ್ಯಕೀಯ ವೃತ್ತಿ ನಿರತರ ಹೆಸರುಗಳನ್ನು ಅಥವಾ ಮದ್ರಾಸ್ ಸರ್ಕಾರವು ತನ್ನ ಆದೇಶ ಸಂಖ್ಯೆ 231 ಪಿಎಚ್, ದಿನಾಂಕ 1ನೇ ಫೆಬ್ರವರಿ, 1933ರ ಮೂಲಕ ಹೊರಡಿಸಿದ ಭಾರತೀಯ ವೈದ್ಯ ವೃತ್ತಿ ನಿರತರ ನೋಂದಣಿಗಾಗಿ, ನಿಯಮಗಳ ಮೇರೆಗೆ ಭಾರತೀಯ ವೈದ್ಯ ಕೇಂದ್ರ ಮಂಡಲಿಯು ನಿರ್ವಹಿಸುವ ರಿಜಿಸ್ಟರ್‌ನಲ್ಲಿ 1956ರ ನವೆಂಬರ್ ಒಂದನೇ ದಿನಾಂಕಕ್ಕೂ ಮುಂಚೆ ನೋಂದಣಿ ಮಾಡಿದ ವೈದ್ಯಕೀಯ ವೃತ್ತಿ ನಿರತರ ಹೆಸರುಗಳನ್ನು ರಿಜಿಸ್ಟರಿನಲ್ಲಿ ನಮೂದಿಸಲು ಅರ್ಜಿ ಹಾಕಿಕೊಂಡ ಮೇಲೆ ಮತ್ತು ಎರಡು ರೂಪಾಯಿಗಳ ಶುಲ್ಕ ಸಂದಾಯ ಮಾಡಿದ ಮೇಲೆ ವೈದ್ಯ ವೃತ್ತಿ ನಿರತರ ಹೆಸರುಗಳನ್ನು ರಿಜಿಸ್ಟರಿನಲ್ಲಿ ನಮೂದಿಸತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) (1) ನೇ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧ್ಯಾಯವು ಜಾರಿಗೆ ಬಂದ ದಿನಾಂಕಕ್ಕೂ ಮುಂಚೆ ಹತ್ತು ವರ್ಷಗಳಿಗೆ ಕಡಿಮೆ ಇಲ್ಲದ ಅವಧಿಯವರೆಗೆ ಒಬ್ಬ ವೈದ್ಯ ವೃತ್ತಿನಿರತ [1][ಕರ್ನಾಟಕ ರಾಜ್ಯ][1] ದಲ್ಲಿ ನಿಯತವಾಗಿ ವೈದ್ಯ ವೃತ್ತಿ ನಡೆಸಿದ ಬಗ್ಗೆ ಮತ್ತು ಈ ಅಧ್ಯಾಯದ ಮೇರೆಗೆ ಒಬ್ಬ ವೈದ್ಯ ವೃತ್ತಿಗನಾಗಿ ನೋಂದಾಯಿಸಿಕೊಳ್ಳಲು [2][ಸದರಿ ದಿನಾಂಕದಂದು ಇಪ್ಪತ್ತೈದು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿದ ಬಗ್ಗೆ][2] ರುಜುವಾತಾಗಿ ರಿಜಿಸ್ಟ್ರಾರನಿಗೆ ಮನದಟ್ಟು ಮಾಡಿಕೊಡಲು ನಿಯಮಿಸಬಹುದಾದಂಥ ಆಧಾರವನ್ನು [3][1981ರ ಡಿಸೆಂಬರ್ 31ನೇ ದಿನಾಂಕದ ಮುಕ್ತಾಯಕ್ಕೆ ಮುಂಚೆ][3] ಹಾಜರುಪಡಿಸುವ ಪ್ರತಿಯೊಬ್ಬ ವ್ಯಕ್ತಿಯು ಹದಿನೈದು ರೂಪಾಯಿಗಳ ಶುಲ್ಕವನ್ನು ಸಂದಾಯ ಮಾಡಿದ ಮೇಲೆ ರಿಜಿಸ್ಟರ್‌ನಲ್ಲಿ ತನ್ನ ಹೆಸರನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು:

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

2. 1968ರ ಅಧಿನಿಯಮ 3 ರ ಮೂಲಕ 15.3.1962ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1981ರ ಅಧಿನಿಯಮ 46ರ ಮೂಲಕ 1.10.1981ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ವೃತ್ತಿ ಗೌರವಕ್ಕೆ ಕುಂದು ತರುವ ನಡತೆಗಾಗಿ ಕೇಂದ್ರ ಅಧಿನಿಯಮ ಅಥವಾ ಯಾವುದೇ ರಾಜ್ಯ ಅಧಿನಿಯಮದ ಮೇರೆಗೆ ಇಡಲಾದ ರಿಜಿಸ್ಟರಿನಿಂದ ಅಥವಾ ಅವನು ವೈದ್ಯ ವೃತ್ತಿ ನಡೆಸುತ್ತಿದ್ದ ಯಾವುದೇ ದೇಶದ ರಿಜಿಸ್ಟರಿನಿಂದ ಹೆಸರನ್ನು ತೆಗೆದು ಹಾಕಲಾಗಿರುವ ಯಾರೇ ವ್ಯಕ್ತಿಯು, ರಾಜ್ಯ ಸರ್ಕಾರ ಮತ್ತು ಮಂಡಲಿಯ ಪೂರ್ವಾನುಮೋದನೆ ಪಡೆದ ಹೊರತು ತನ್ನ ಹೆಸರನ್ನು ರಿಜಿಸ್ಟರ್‌ನಲ್ಲಿ ನಮೂದಿಸಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

[1][(2ಎ). (1) ಮತ್ತು (2) ನೇ ಉಪ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಆದರೆ, (2)ನೇ ಉಪ ಪ್ರಕರಣದ ಪರಂತುಕಕ್ಕೆ ಒಳಪಟ್ಟು, ತಿದ್ದುಪಡಿ ಅಧಿನಿಯಮವು ಜಾರಿಗೆ ಬಂದ ದಿನಾಂಕಕ್ಕೂ ಮುಂಚೆ ಹತ್ತು ವರ್ಷಗಳಿಗೆ ಕಡಿಮೆಯಿಲ್ಲದ ಅವಧಿಯವರೆಗೆ ಪ್ರಕೃತಿ ಚಿಕಿತ್ಸಾ ಪದ್ಧತಿ, ಸಿದ್ಧ ವೈದ್ಯ ಪದ್ಧತಿ ಮತ್ತು ಯೋಗ ಚಿಕಿತ್ಸಾ ಪದ್ಧತಿಯ ಒಬ್ಬ ವೈದ್ಯ ವೃತ್ತಿಗನಾಗಿ ಕರ್ನಾಟಕ ರಾಜ್ಯದಲ್ಲಿ ನಿಯತವಾಗಿ ವೈದ್ಯ ವೃತ್ತಿ ನಡೆಸಿದ ಬಗ್ಗೆ ಮತ್ತು ಈ ಅಧ್ಯಾಯದ ಮೇರೆಗೆ ಒಬ್ಬ ವೈದ್ಯ ವೃತ್ತಿನಿರತನಾಗಿ ನೋಂದಾಯಿಸಿಕೊಳ್ಳಲು ಸದರಿ ದಿನಾಂಕದಂದು ಮೂವತ್ತೈದು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿದ ಬಗ್ಗೆ ರುಜುವಾತಾಗಿ ರಿಜಿಸ್ಟ್ರಾರನಿಗೆ ಮನದಟ್ಟು ಮಾಡಿಕೊಡಲು ನಿಯಮಿಸಬಹುದಾದಂಥ ಆಧಾರವನ್ನು, ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ಹಾಜರುಪಡಿಸುವ ಪ್ರತಿಯೊಬ್ಬ ವ್ಯಕ್ತಿಯು, (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಶುಲ್ಕವನ್ನು ಸಂದಾಯ ಮಾಡಿದ ಮೇಲೆ ರಿಜಿಸ್ಟರಿನಲ್ಲಿ ತನ್ನ ಹೆಸರನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು][1].

1. 1992ರ ಅಧಿನಿಯಮ 11ರ ಮೂಲಕ 24.04.1992ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ಮಂಡಲಿಯು ಮಾಡಿದ ಯುಕ್ತ ವಿಚಾರಣೆಯ ತರುವಾಯ ಯಾರೇ ವೈದ್ಯ ವೃತ್ತಿ ನಿರತನು ಯಾವುದೇ ದುರ್ನಡತೆಯ ತಪ್ಪಿತಸ್ಥನೆಂದು ಕಂಡುಬಂದಲ್ಲಿ, ಮಂಡಲಿಯು,–

(ಎ) ಅಂಥ ವೈದ್ಯ ವೃತ್ತಿ ನಿರತನನ್ನು ಸಂಬೋಧಿಸಿ ಎಚ್ಚರಿಕೆಯ ಪತ್ರವನ್ನು ನೀಡಬಹುದು; ಅಥವಾ

(ಬಿ) ಅಂಥ ವೈದ್ಯ ವೃತ್ತಿ ನಿರತನ ಹೆಸರನ್ನು,–

(i) ನಿರ್ದೇಶನದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿವರೆಗೆ ರಿಜಿಸ್ಟರಿನಿಂದ ತೆಗೆದುಹಾಕುವಂತೆ; ಅಥವಾ

(ii) ಅಂಥ ತೆಗೆದುಹಾಕುವಿಕೆಯ ಅವಧಿಯನ್ನು ನಿರ್ದಿಷ್ಟಪಡಿಸದೆ ರಿಜಿಸ್ಟರಿನಿಂದ ತೆಗೆದುಹಾಕುವಂತೆ ನಿರ್ದೇಶಿಸಬಹುದು.

***ವಿವರಣೆ:–*** ಈ ಉಪ ಪ್ರಕರಣದ ಉದ್ದೇಶಗಳಿಗಾಗಿ " ದುರ್ನಡತೆ " ಎಂದರೆ,–

(ಎ) ನೈತಿಕ ಅಧಃಪತನವನ್ನು ಒಳಗೊಳ್ಳುವ ಮತ್ತು ಕ್ರಿಮಿನಲ್ ಪ್ರಕ್ರಿಯಾ ಸಂಹಿತೆ, 1898 ರಲ್ಲಿ (1898ರ ಕೇಂದ್ರಾಧಿನಿಯಮ V) ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಪರಿಭಾಷಿಸಲಾದಂತೆ ಸಂಜ್ಞೇಯವಿರುವ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ವೈದ್ಯ ವೃತ್ತಿ ನಿರತನ ದೋಷ ಸಿದ್ಧಿಯಾಗಿರುವುದು;

(ಬಿ) ಮಂಡಲಿಯ ಅಭಿಪ್ರಾಯದಲ್ಲಿ ವೃತ್ತಿ ಗೌರವಕ್ಕೆ ಕುಂದು ತರುವಂಥ ಯಾವುದೇ ನಡತೆ.

ಮಂಡಲಿಯು, ಸಾಕಷ್ಟು ಸೂಕ್ತ ಕಾರಣಗಳನ್ನು ತೋರಿಸಿದ ಮೇಲೆ ಮತ್ತು ರಾಜ್ಯ ಸರ್ಕಾರದ ಅನುಮೋದನೆ ಪಡೆದು, ಹಾಗೆ ತೆಗೆದುಹಾಕಲಾದ ವೈದ್ಯ ವೃತ್ತಿ ನಿರತನ ಹೆಸರನ್ನು ರಿಜಿಸ್ಟರಿನಲ್ಲಿ ಮರು ನಮೂದಿಸುವಂತೆ ಆದೇಶಿಸಬಹುದು.

(4) (3)ನೇ ಉಪ ಪ್ರಕರಣದ ಮೇರೆಗೆ ರಿಜಿಸ್ಟರಿನಿಂದ ಒಬ್ಬ ವ್ಯಕ್ತಿಯ ಹೆಸರನ್ನು ತೆಗೆದುಹಾಕಿದ ಮಂಡಲಿಯ ಯಾವುದೇ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಆ ಆದೇಶವು ಅವನಿಗೆ ತಲುಪಿದ ದಿನಾಂಕದಿಂದ ತೊಂಬತ್ತು ದಿನಗಳ ಒಳಗಾಗಿ ರಾಜ್ಯ ಸರ್ಕಾರಕ್ಕೆ ಅಪೀಲು ಸಲ್ಲಿಸಬಹುದು.

17. **ರಿಜಿಸ್ಟ್ರಾರನ ನಿರ್ಣಯಕ್ಕೆ ಸಂಬಂಧಿಸಿದಂತೆ ಮಂಡಲಿಗೆ ಅಪೀಲು.–** (1) ಯಾರೇ ವ್ಯಕ್ತಿಯ ನೋಂದಣಿಗೆ ಅಥವಾ ರಿಜಿಸ್ಟರಿನಲ್ಲಿನ ಯಾವುದೇ ನಮೂದಿಗೆ ಸಂಬಂಧಿಸದಂತೆ ರಿಜಿಸ್ಟ್ರಾರನ ನಿರ್ಣಯದಿಂದ ಬಾಧಿತನಾದ ಯಾರೇ ವ್ಯಕ್ತಿಯು ಮಂಡಲಿಗೆ ಅಪೀಲು ಸಲ್ಲಿಸಬಹುದು.

(2) ಮಂಡಲಿಯು, ಅಂಥ ಅಪೀಲನ್ನು ನಿಯಮಿಸಲಾದ ರೀತಿಯಲ್ಲಿ ಸಲ್ಲಿಸತಕ್ಕದ್ದು. ಮತ್ತು ವಿಚಾರಣೆ ನಡೆಸತಕ್ಕದ್ದು ಮತ್ತು ತೀರ್ಮಾನಿಸತಕ್ಕದ್ದು.

(3) ಮಂಡಲಿಯು, ಸ್ವತಃ ತಾನೇ ಆಗಲಿ ಅಥವಾ ಯಾರೇ ವ್ಯಕ್ತಿಯ ಮನವಿಯ ಮೇಲೆ ಆಗಲಿ, ಸೂಕ್ತ ವಿಚಾರಣೆಯ ತರುವಾಯ ಮತ್ತು ಸಂಬಂಧಪಟ್ಟ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಒಂದು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯ, ಅಂಥ ನಮೂದನೆಯು ವಂಚನೆಯಿಂದ ಅಥವಾ ತಪ್ಪಾಗಿ ಮಾಡಿದುದೆಂದು ಮಂಡಲಿಯು ಅಭಿಪ್ರಾಯಪಟ್ಟರೆ, ರಿಜಿಸ್ಟರಿನಲ್ಲಿರುವ ಯಾವುದೇ ನಮೂದನ್ನು ರದ್ದುಗೊಳಿಸಬಹುದು ಅಥವಾ ಬದಲಾಯಿಸಬಹುದು.

(4) (3)ನೇ ಉಪ ಪ್ರಕರಣದ ಮೇರೆಗೆ ಮಂಡಲಿಯ ಯಾವುದೇ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಆದೇಶವು ತಲುಪಿದ ದಿನಾಂಕದಿಂದ ತೊಂಬತ್ತು ದಿನಗಳ ಒಳಗಾಗಿ ರಾಜ್ಯ ಸರ್ಕಾರಕ್ಕೆ ಅಪೀಲು ಸಲ್ಲಿಸಬಹುದು.

18. [1][**ಈ ಅಧಿನಿಯಮದ ಮೇರೆಗೆ ನೋಂದಣಿಗೆ ಅರ್ಹರಲ್ಲದ]**[1] **ವೈದ್ಯ ವೃತ್ತಿಯಲ್ಲಿ ತೊಡಗಿರುವ ವ್ಯಕ್ತಿಗಳ ಪಟ್ಟಿಯ ನಿರ್ವಹಣೆ.–** [1][(1) ರಿಜಿಸ್ಟ್ರಾರನು, ಈ ಅಧ್ಯಾಯದ ಪ್ರಾರಂಭದ ದಿನಾಂಕದಂದು ವೈದ್ಯ ವೃತ್ತಿಯಲ್ಲಿ ತೊಡಗಿರುವ ವ್ಯಕ್ತಿಗಳ ಪಟ್ಟಿಯೆಂದು ಕರೆಯಲಾಗುವ ಪಟ್ಟಿಯಲ್ಲಿ [2][(2) ಮತ್ತು (2ಎ) ಉಪ ಪ್ರಕರಣಗಳ ಮೇರೆಗೆ ತಮ್ಮ ಹೆಸರುಗಳನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವರಾದ ವ್ಯಕ್ತಿಗಳ ಒಂದು ಪಟ್ಟಿಯನ್ನು ಸಹ ಸದರಿ ಉಪ ಪ್ರಕರಣಗಳ][2] ಉಪಬಂಧಗಳಿಗನುಸಾರವಾಗಿ ಸಿದ್ಧಪಡಿಸತಕ್ಕದ್ದು][1].

1. 1966ರ ಅಧಿನಿಯಮ 9ರ ಮೂಲಕ 15.3.1962ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಿದೆ.

2. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಿದೆ.

(2) (3)ನೇ ಉಪ ಪ್ರಕರಣದ ಉಪಬಂಧಗಳಿಗೊಳಪಟ್ಟು, ಆಯುರ್ವೇದ ಅಥವಾ ಯುನಾನಿ ವೈದ್ಯ ಪದ್ಧತಿ ಅಥವಾ ಅದರ ಯಾವುವೇ ಶಾಖೆಗಳಲ್ಲಿ ಈ ಅಧ್ಯಾಯದ ಪ್ರಾರಂಭಕ್ಕೆ ಮುಂಚೆ ಕಡೇ ಪಕ್ಷ ಐದು ವರ್ಷಗಳವರೆಗೆ [1][ಕರ್ನಾಟಕ ರಾಜ್ಯ][1] ದಲ್ಲಿ ನಿಯತವಾಗಿ ವೈದ್ಯ ವೃತ್ತಿಯಲ್ಲಿ ತೊಡಗಿದ ಬಗ್ಗೆ, [2][ಮತ್ತು ಈ ಅಧ್ಯಾಯದ ಪ್ರಾರಂಭದ ದಿನಾಂಕದಂದು ಇಪ್ಪತ್ತು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿದ ಬಗ್ಗೆ][2] [3][1981ರ ಡಿಸೆಂಬರ್ 31ನೇ ದಿನಾಂಕದ ಮುಕ್ತಾಯಕ್ಕೆ ಮುಂಚೆ][3] ರಿಜಿಸ್ಟ್ರಾರನಿಗೆ ಮನದಟ್ಟಾಗುವಂತೆ ರುಜುವಾತುಪಡಿಸುವ ಮತ್ತು ಈ ಅಧಿನಿಯಮದ ಮೇರೆಗಿನ ನೋಂದಣಿಗೆ ಅರ್ಹ ವ್ಯಕ್ತಿಯಲ್ಲದ ಪ್ರತಿಯೊಬ್ಬ ವ್ಯಕ್ತಿಯು, ಹತ್ತು ರೂಪಾಯಿಗಳ ಶುಲ್ಕವನ್ನು ಸಂದಾಯ ಮಾಡಿದ ಮೇಲೆ, ಮೇಲೆ ಹೇಳಲಾದ ಪಟ್ಟಿಯಲ್ಲಿ ತನ್ನ ಹೆಸರನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು:

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

2. 1968ರ ಅಧಿನಿಯಮ 3ರ ಮೂಲಕ 15.3.1962ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1981ರ ಅಧಿನಿಯಮ 46ರ ಮೂಲಕ 1.10.81ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ವೃತ್ತಿ ಗೌರವಕ್ಕೆ ಕುಂದು ತರುವ ನಡತೆಗಾಗಿ ಕೇಂದ್ರ ಅಥವಾ ಯಾವುದೇ ರಾಜ್ಯ ಅಧಿನಿಯಮದ ಮೇರೆಗೆ ಇಡಲಾದ ರಿಜಿಸ್ಟರಿನಿಂದ ಅಥವಾ ಅವನು ವೈದ್ಯ ವೃತ್ತಿ ನಡೆಸುತ್ತಿದ್ದ ಯಾವುದೇ ದೇಶದ ರಿಜಿಸ್ಟರಿನಿಂದ ಹೆಸರನ್ನು ತೆಗೆದುಹಾಕಲಾಗಿರುವ ಯಾರೇ ವ್ಯಕ್ತಿಯು ಪಟ್ಟಿಯಲ್ಲಿ ತನ್ನ ಹೆಸರನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

[1][(2ಎ) (2)ನೇ ಉಪ ಪ್ರಕರಣದ ಉಪಬಂಧ ಮತ್ತು (3) ನೇ ಉಪ ಪ್ರಕರಣದ ಉಪಬಂಧಗಳಿಗೊಳಪಟ್ಟು, ಈ ಅಧಿನಿಯಮದ ಮೇರೆಗೆ ನೋಂದಣಿಗೆ ಅರ್ಹನಲ್ಲದ ಪ್ರತಿಯೊಬ್ಬ ವ್ಯಕ್ತಿಯು ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದೊಳಗಾಗಿ, ಪ್ರಕೃತಿ ಚಿಕಿತ್ಸಾ ಪದ್ಧತಿಯಲ್ಲಿ, ಸಿದ್ಧ ವೈದ್ಯ ಪದ್ಧತಿಯಲ್ಲಿ ಅಥವಾ ಯೋಗ ಚಿಕಿತ್ಸಾ ಪದ್ಧತಿಯಲ್ಲಿ ಅಥವಾ ಅದರ ಯಾವುವೇ ಶಾಖೆಗಳಲ್ಲಿ ತಿದ್ದುಪಡಿ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ಕಡೇ ಪಕ್ಷ ಐದು ವರ್ಷಗಳವರೆಗೆ ಕರ್ನಾಟಕ ರಾಜ್ಯದಲ್ಲಿ ನಿಯತವಾಗಿ ವೈದ್ಯ ವೃತ್ತಿಯಲ್ಲಿ ತೊಡಗಿದ್ದುದಾಗಿ ಮತ್ತು ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಂದು ಮೂವತ್ತು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿರುವುದಾಗಿ ರಿಜಿಸ್ಟ್ರಾರನಿಗೆ ಮನದಟ್ಟಾಗುವಂತೆ ರುಜುವಾತು ಪಡಿಸಿದರೆ, ಒಂದು ನೂರು ರೂಪಾಯಿಗಳನ್ನು ಸಂದಾಯ ಮಾಡಿದ ಮೇಲೆ, ಮೇಲೆ ಹೇಳಲಾದ ಪಟ್ಟಿಯಲ್ಲಿ ತನ್ನ ಹೆಸರನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು. ][1]

1.1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) [1][(2) ಮತ್ತು (2ಎ) ಉಪ ಪ್ರಕರಣಗಳ][1] ಮೇರೆಗೆ, ಪಟ್ಟಿಯಲ್ಲಿ ಹೆಸರು ನಮೂದಿಸಿರುವ ಪ್ರತಿಯೊಬ್ಬ ವ್ಯಕ್ತಿಯು, ಪಟ್ಟಿಯಲ್ಲಿ ನಮೂದಿಸಿದ ದಿನಾಂಕದಿಂದ ಐದು ವರ್ಷಗಳ ಅವಧಿಯೊಳಗಾಗಿ ಈ ಉದ್ದೇಶಕ್ಕಾಗಿ ಮಂಡಲಿಯಿಂದ ನಡೆಸಲಾಗುವ ಪರೀಕ್ಷೆಯಲ್ಲಿ ಉತ್ತೀರ್ಣನಾಗತಕ್ಕದ್ದು ಮತ್ತು ಅಂಥ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ವ್ಯಕ್ತಿಗಳ ಹೆಸರುಗಳನ್ನು ಅಂಥ ಪಟ್ಟಿಯಿಂದ ತೆಗೆದುಹಾಕತಕ್ಕದ್ದು.

1. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) 15 ನೇ ಪ್ರಕರಣದ (3) ಮತ್ತು (4)ನೇ ಉಪ ಪ್ರಕರಣಗಳು, 16 ನೇ ಪ್ರಕರಣದ (3) ಮತ್ತು (4) ನೇ ಉಪ ಪ್ರಕರಣಗಳು ಮತ್ತು 17 ನೇ ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಈ ಪ್ರಕರಣದ ಮೇರೆಗೆ ಇಡಲಾದ ಪಟ್ಟಿಗೆ ಅನ್ವಯವಾಗತಕ್ಕದ್ದು.

**19. ನವೀಕರಣ ಶುಲ್ಕ.–** (1) 16 ಅಥವಾ 18 ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, [1][16 ನೇ ಪ್ರಕರಣದ (1) ನೇ ಉಪ ಪ್ರಕರಣದ ಮೇರೆಗೆ ರಿಜಿಸ್ಟರಿನಲ್ಲಿ ಹೆಸರು ನಮೂದಿಸಲಾಗಿರುವ ಅಥವಾ ಈ ಉಪ ಪ್ರಕರಣದ ಪರಂತುಕದ ಮೇರೆಗೆ ರಿಜಿಸ್ಟರ್ ಅಥವಾ ಪಟ್ಟಿಯಲ್ಲಿ ಹೆಸರನ್ನು ಮುಂದುವರಿಸಲಾಗಿರುವ ವೈದ್ಯಕೀಯ ವೃತ್ತಿನಿರತನಲ್ಲದ][1] ಪ್ರತಿಯೊಬ್ಬ ವೈದ್ಯಕೀಯ ವೃತ್ತಿ ನಿರತನು ಯಾವ ವರ್ಷದಲ್ಲಿ ರಿಜಿಸ್ಟರ್ ಅಥವಾ ಪಟ್ಟಿಯಲ್ಲಿ ಅವನ ಹೆಸರನ್ನು ನಮೂದಿಸಲಾಗಿದೆಯೋ [2]ಆ[2] ವರ್ಷದ ಡಿಸೆಂಬರ್ ಮೂವತ್ತೊಂದರಂದು ಅಥವಾ ಅದಕ್ಕೆ ಮುಂಚೆ, ಮತ್ತು ಆ ತರುವಾಯದ ಪ್ರತಿಯೊಂದು [XXX][3] ವರ್ಷವೂ, ಸಂದರ್ಭಾನುಸಾರ, ರಿಜಿಸ್ಟರ್ ಅಥವಾ ಪಟ್ಟಿಯಲ್ಲಿ ಅವನ ಹೆಸರನ್ನು ಮುಂದುವರಿಸಲು [3][ಇಪ್ಪತ್ತು] ರೂಪಾಯಿಗಳ ನವೀಕರಣ ಶುಲ್ಕವನ್ನು ಮಂಡಲಿಗೆ ಸಂದಾಯ ಮಾಡತಕ್ಕದ್ದು:

1. 1991ರ ಅಧಿನಿಯಮ 38ರ ಮೂಲಕ 10.12.1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1977 ಅಧಿನಿಯಮ 7ರ ಮೂಲಕ 5.3.1977ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1991ರ ಅಧಿನಿಯಮ 38ರ ಮೂಲಕ 10.12.1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತು, ಈ ಅಧಿನಿಯಮದ ಮೇರೆಗೆ ನೋಂದಾಯಿತನಾದ ವೈದ್ಯಕೀಯ ವೃತ್ತಿ ನಿರತನು, ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತ ಸಂಕೀರ್ಣ ಉಪಬಂಧಗಳ (ತಿದ್ದುಪಡಿ) ಅಧಿನಿಯಮ, 1991ರ ಪ್ರಾರಂಭಕ್ಕೆ ಮುಂಚೆ, ಆಜೀವ ನೋಂದಣಿಗಾಗಿ ಸಂದರ್ಭಾನುಸಾರ, ರಿಜಿಸ್ಟರ್ ಅಥವಾ ಪಟ್ಟಿಯಲ್ಲಿ ತನ್ನ ಹೆಸರನ್ನು ಮುಂದುವರಿಸುವುದಕ್ಕಾಗಿ ಎರಡು ನೂರು ರೂಪಾಯಿಗಳ ನವೀಕರಣ ಶುಲ್ಕವನ್ನು ಸಂದಾಯ ಮಾಡಬಹುದು.][1]

1. 1991ರ ಅಧಿನಿಯಮ 38ರ ಮೂಲಕ 10.12.1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ನವೀಕರಣ ಶುಲ್ಕವನ್ನು ಕೊನೆಯ ದಿನಾಂಕಕ್ಕೆ ಮುಂಚೆ ಸಂದಾಯ ಮಾಡದಿದ್ದರೆ, ಹಾಗೆ ಸಂದಾಯ ಮಾಡಲು ತಪ್ಪಿದವನ ಹೆಸರನ್ನು ರಿಜಿಸ್ಟ್ರಾರನು ಸಂದರ್ಭಾನುಸಾರ ರಿಜಿಸ್ಟರ್ ಅಥವಾ ಪಟ್ಟಿಯಿಂದ ತೆಗೆದು ಹಾಕಬಹುದು:

ಪರಂತು, ಹಾಗೆ ತೆಗೆದು ಹಾಕಲಾದ ಹೆಸರನ್ನು, ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು, ನವೀಕರಣ ಶುಲ್ಕವನ್ನು ಸಂದಾಯ ಮಾಡಿದ ಮೇಲೆ ರಿಜಿಸ್ಟರ್ ಅಥವಾ ಪಟ್ಟಿಯಲ್ಲಿ ಮರು ನಮೂದಿಸಹುದು.

**20. ನೋಂದಾಯಿತ ವೈದ್ಯ ವೃತ್ತಿ ನಿರತರ ವಿಶೇಷಾಧಿಕಾರಗಳು.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ,–

(1) 'ಕಾನೂನುಬದ್ಧವಾಗಿ ಅರ್ಹನಾದ ವೈದ್ಯಕೀಯ ವೃತ್ತಿ ನಿರತ' ಅಥವಾ 'ಕ್ರಮಬದ್ಧವಾಗಿ ಅರ್ಹನಾದ ವೈದ್ಯಕೀಯ ವೃತ್ತಿ ನಿರತ ' ಎಂಬ ಅಭಿವ್ಯಕ್ತಿಯು ಅಥವಾ ವೈದ್ಯಕೀಯ ವೃತ್ತಿನಿರತನಾಗಿ ಅಥವಾ ವೈದ್ಯಕೀಯ ವೃತ್ತಿಯ ಒಬ್ಬ ಸದಸ್ಯನಾಗಿ ಕಾನೂನಿನ ಮೂಲಕ ಮಾನ್ಯತೆ ಪಡೆದ ವ್ಯಕ್ತಿಗೆ ಸಂಬಂಧಿಸಿದ ಅರ್ಥ ನೀಡುವ ಯಾವುದೇ ಪದ ಅಥವಾ ಅಭಿವ್ಯಕ್ತಿಯು, [1][ಕರ್ನಾಟಕ ರಾಜ್ಯ ][1] ದಲ್ಲಿ ಜಾರಿಯಲ್ಲಿರುವ ಎಲ್ಲ ಕಾನೂನುಗಳಲ್ಲಿ, ಅಂಥ ಕಾನೂನುಗಳು ಭಾರತ ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿ ಅಥವಾ IIIನೇ ಪಟ್ಟಿಗಳಲ್ಲಿ ನಿರ್ದಿಷ್ಟಪಡಿಸಲಾದ ಯಾವುವೇ ವಿಷಯಗಳಿಗೆ ಸಂಬಂಧಪಟ್ಟಂತೆ ಅನ್ವಯವಾಗುವಷ್ಟರ ಮಟ್ಟಿಗೆ, ನೋಂದಾಯಿತ ವೈದ್ಯವೃತ್ತಿ ನಿರತರನ್ನು ಒಳಗೊಂಡಿದೆಯೆಂದು ಭಾವಿಸತಕ್ಕದ್ದು:

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) ಯಾವುದೇ ಅಧಿನಿಯಮದ ಮೂಲಕ ಯಾರೇ ವೈದ್ಯ ವೃತ್ತಿ ನಿರತರಿಂದ ಅಥವಾ ವೈದ್ಯಾಧಿಕಾರಿಯಿಂದ ಅಗತ್ಯಪಡಿಸಲಾದ ಪ್ರಮಾಣಪತ್ರವು, ಅಂಥ ಪ್ರಮಾಣಪತ್ರಕ್ಕೆ ನೋಂದಾಯಿತ ವೈದ್ಯ ವೃತ್ತಿ ನಿರತನು ಸಹಿ ಮಾಡಿದ್ದರೆ, ಮಾನ್ಯವಾಗಿರತಕ್ಕದ್ದು.

(3) ನೋಂದಾಯಿತ ವೈದ್ಯ ವೃತ್ತಿ ನಿರತನು, ಯಾವುದೇ ವೈದ್ಯಕೀಯ ಸಂಸ್ಥೆಯಲ್ಲಿ ಯಾವ ಔಷಧ ಪದ್ಧತಿಯಲ್ಲಿ ಅವನು ನೋಂದಾಯಿತನಾಗಿರುವನೋ ಆ ಔಷಧ ಪದ್ಧತಿಯಲ್ಲಿ ವೈದ್ಯಾಧಿಕಾರಿಯಾಗಿ ನೇಮಕ ಹೊಂದಲು ಅರ್ಹನಾಗಿರತಕ್ಕದ್ದು.

(4) ನೋಂದಾಯಿತ ವೈದ್ಯ ವೃತ್ತಿ ನಿರತನು, ಅವನಿಗೆ ಸಂಬಂಧಿಸಿದ ಔಷಧ ಪದ್ಧತಿ ಅಥವಾ ಪದ್ಧತಿಗಳಲ್ಲಿನ ವಿಷಕಾರಿ ಔಷಧಗಳನ್ನು ಇಟ್ಟುಕೊಳ್ಳಬಹುದು ಮತ್ತು ಔಷಧಿಯಾಗಿ ಬರೆದುಕೊಡಬಹುದು.

**21. ನೋಂದಣಿ ಮಾಡಿಕೊಳ್ಳಲು ಅರ್ಹತೆ.–**(1)16ನೇ ಪ್ರಕರಣದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು ಮತ್ತು 23 ಮತ್ತು 25ನೇ ಪ್ರಕರಣಗಳ ಉಪಬಂಧಗಳಿಗೊಳಪಟ್ಟು, [1][1981ರ ಡಿಸೆಂಬರ್, 31ನೇ ದಿನಾಂಕದ][1] ಮುಕ್ತಾಯದಂದು ಮತ್ತು ಆ ತರುವಾಯ, ಈ ಅಧಿನಿಯಮದ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದಂಥ ಅರ್ಹತಾ ಪರೀಕ್ಷೆಯಲ್ಲಿ ಉತ್ತೀರ್ಣನಾಗದ ಹೊರತು, ನೋಂದಾಯಿತ ವೈದ್ಯ ವೃತ್ತಿ ನಿರತನೆಂದು ಯಾರೇ ವ್ಯಕ್ತಿಯ ಹೆಸರನ್ನು ರಿಜಿಸ್ಟರಿನಲ್ಲಿ ನಮೂದಿಸತಕ್ಕದ್ದಲ್ಲ.

1. 1981ರ ಅಧಿನಿಯಮ 46ರ ಮೂಲಕ 1.10.1981 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

1[(1ಎ) (1)ನೇ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ ಮತ್ತು 16ನೇ ಪ್ರಕರಣದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು ಮತ್ತು 23 ಮತ್ತು 25 ನೇ ಪ್ರಕರಣಗಳ ಉಪಬಂಧಗಳಿಗೊಳಪಟ್ಟು, ತಿದ್ದುಪಡಿ ಅಧಿನಿಯಮವು ಜಾರಿಗೆ ಬಂದಂದಿನಿಂದ ಒಂದು ವರ್ಷವು ಮುಕ್ತಾಯವಾದ ತರುವಾಯ ಈ ಅಧಿನಿಯಮದ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಅರ್ಹತಾ ಪರೀಕ್ಷೆಯಲ್ಲಿ ಅವನು ಉತ್ತೀರ್ಣನಾದ ಹೊರತು, ಪ್ರಕೃತಿ ಚಿಕಿತ್ಸಾ ಪದ್ಧತಿ ಅಥವಾ ಸಿದ್ಧ ಔಷಧ ಪದ್ಧತಿ ಅಥವಾ ಯೋಗ ಚಿಕಿತ್ಸಾ ಪದ್ಧತಿಯಲ್ಲಿನ ನೋಂದಾಯಿತ ವೈದ್ಯ ವೃತ್ತಿ ನಿರತನೆಂದು ಯಾರೇ ವ್ಯಕ್ತಿಯ ಹೆಸರನ್ನು ರಿಜಿಸ್ಟರಿನಲ್ಲಿ ನಮೂದಿಸತಕ್ಕದ್ದಲ್ಲ.][1]

1. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(2) ರಾಜ್ಯ ಸರ್ಕಾರವು, ಮಂಡಲಿಯೊಂದಿಗೆ ಸಮಾಲೋಚಿಸಿದ ತರುವಾಯ, ಅಧಿಸೂಚನೆಯ ಮೂಲಕ ತಾನು ಯುಕ್ತವೆಂದು ಭಾವಿಸುವಂಥ ರೀತಿಯಲ್ಲಿ ಅನುಸೂಚಿಯನ್ನು ತಿದ್ದುಪಡಿ ಮಾಡಬಹುದು ಮತ್ತು ಯಾವುದೇ ಪರೀಕ್ಷೆಯನ್ನು ಅನುಸೂಚಿಗೆ ಸೇರಿಸುವಾಗ, ರಾಜ್ಯ ಸರ್ಕಾರವು ಅನುಮತಿ ನೀಡಿದಾಗ ಮಾತ್ರ ನಿರ್ದಿಷ್ಟಪಡಿಸಲಾದ ದಿನಾಂಕದ ತರುವಾಯ, ಇದು, ಅರ್ಹತಾ ಪರೀಕ್ಷೆ ಎಂದು ಘೋಷಿಸತಕ್ಕದ್ದು.][1]

1. 1966ರ ಅಧಿನಿಯಮ 32ರ ಮೂಲಕ 22.12.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**22. ಸಂಸ್ಥೆಗಳ ಮಾನ್ಯತೆ.–** (1) ಯಾವುದೇ ಔಷಧ ಪದ್ಧತಿಯಲ್ಲಿ ಶಿಕ್ಷಣವನ್ನು ನೀಡುವ ಮತ್ತು ಅರ್ಹತಾ ಪರೀಕ್ಷೆಗಳನ್ನು ನಡೆಸುವ ಉದ್ದೇಶಕ್ಕಾಗಿ, ಈ ಅಧಿನಿಯಮದ ಮೇರೆಗೆ ಮಾನ್ಯತೆಯನ್ನು ಕೋರುವ ಯಾವುದೇ ಸಂಸ್ಥೆಯು, ರಿಜಿಸ್ಟ್ರಾರನಿಗೆ ಒಂದು ಅರ್ಜಿಯನ್ನು ಕಳುಹಿಸತಕ್ಕದ್ದು ಮತ್ತು ಈ ಮುಂದಿನ ವಿಷಯಗಳಿಗೆ ಸಂಬಂಧಿಸಿದಂತೆ ಪೂರ್ಣ ಮಾಹಿತಿಯನ್ನು ನೀಡತಕ್ಕದ್ದು, ಎಂದರೆ:–

(ಎ) ಆಡಳಿತ ಮಂಡಲಿಯ ರಚನೆ ಮತ್ತು ಅದರ ಸಿಬ್ಬಂದಿ;

(ಬಿ) ಶಿಕ್ಷಣ ನೀಡುವ ಅಥವಾ ನೀಡಲು ಉದ್ದೇಶಿಸಿರುವ ವಿಷಯಗಳು ಮತ್ತು ವ್ಯಾಸಂಗ ಕ್ರಮಗಳು;

(ಸಿ) ಪ್ರವೇಶಾವಕಾಶ, ಸಾಧನ ಸಾಮಗ್ರಿ ಮತ್ತು ಅವಕಾಶ ಕಲ್ಪಿಸಲಾದ ಅಥವಾ ಕಲ್ಪಿಸಲು ಉದ್ದೇಶಿಸಲಾದ ವಿದ್ಯಾರ್ಥಿಗಳ ಸಂಖ್ಯೆ;

(ಡಿ) ಸಿಬ್ಬಂದಿ ಸಂಖ್ಯೆ, ಅವರ ಸಂಬಳಗಳು, ವಿದ್ಯಾರ್ಹತೆಗಳು ಮತ್ತು ಅವರು ಮಾಡುವ ಸಂಶೋಧನಾ ಕೆಲಸ;

(ಇ) ವಿಧಿಸಲಾದ ಅಥವಾ ವಿಧಿಸಬೇಕೆಂದು ಉದ್ದೇಶಿಸಲಾದ ಶುಲ್ಕ ಹಾಗೂ ಕಟ್ಟಡಗಳು ಮತ್ತು ಸಾಧನ ಸಾಮಗ್ರಿಯ ಮೇಲಣ ಮೂಲ ಧನಕ್ಕಾಗಿ ಮತ್ತು ಸಂಸ್ಥೆಯ ನಿರಂತರ ನಿರ್ವಹಣೆಗಾಗಿ ಮತ್ತು ಸಮರ್ಥ ಕಾರ್ಯನಿರ್ವಹಣೆಗಾಗಿ ಮಾಡಲಾದ ಹಣಕಾಸು ವ್ಯವಸ್ಥೆ.

(2) ರಿಜಿಸ್ಟ್ರಾರನು, ಅರ್ಜಿಯನ್ನು ಮಂಡಲಿಯ ಮುಂದೆ ಇಡತಕ್ಕದ್ದು ಮತ್ತು ಮಂಡಲಿಯು, ತಾನು ಅಗತ್ಯವೆಂದು ಭಾವಿಸಬಹುದಾದ ಯಾವುದೇ ಹೆಚ್ಚಿನ ಮಾಹಿತಿಯನ್ನು ತರಿಸಿಕೊಳ್ಳಲು ರಿಜಿಸ್ಟ್ರಾರನಿಗೆ ನಿರ್ದೇಶಿಸಬಹುದು. ಮಂಡಲಿಯು, ಈ ಸಂಬಂಧವಾಗಿ ತಾನು ಅಧಿಕಾರ ನೀಡಬಹುದಾದ ಸಕ್ಷಮ ವ್ಯಕ್ತಿ ಅಥವಾ ವ್ಯಕ್ತಿಗಳ ಮೂಲಕ ಸ್ಥಳೀಯ ಪರಿಶೀಲನೆ ಮಾಡುವಂತೆ ಸಹ ಆತನಿಗೆ ನಿರ್ದೇಶಿಸಬಹುದು.

(3) ಅಂಥ ಸ್ಥಳೀಯ ಪರಿಶೀಲನೆಯ ವರದಿಯನ್ನು ದಾಖಲು ಮಾಡಿಕೊಂಡ ತರುವಾಯ ಮತ್ತು ಅಗತ್ಯವಿರಬಹುದಾದ ಹೆಚ್ಚಿನ ಪರಿಶೀಲನೆಯನ್ನು ಮಾಡಿದ ತರುವಾಯ, ಮಂಡಲಿಯು, ಕೋರಿದ ಮಾನ್ಯತೆಯನ್ನು ನೀಡತಕ್ಕದ್ದೇ ಅಥವಾ ನೀಡತಕ್ಕದ್ದಲ್ಲವೇ ಎಂಬ ಬಗ್ಗೆ ತನ್ನ ಅಭಿಪ್ರಾಯವನ್ನು ತಿಳಿಸುವ ಅದರ ವರದಿಯನ್ನು ಅರ್ಜಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು, ಆ ತರುವಾಯ ಮಾನ್ಯತೆಯನ್ನು ನೀಡಬಹುದು ಅಥವಾ ತಿರಸ್ಕರಿಸಬಹುದು ಅಥವಾ ತಾನು ಉಚಿತವೆಂದು ಪರಿಗಣಿಸಬಹುದಾದಂಥ ಷರತ್ತುಗಳಿಗೊಳಪಟ್ಟು ನೀಡಬಹುದು ಮತ್ತು ರಾಜ್ಯ ಸರ್ಕಾರದ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

**23. ಅರ್ಹತಾ ಪರೀಕ್ಷೆ.–** (1) ಮಂಡಲಿಯು, ವಿನಿಯಮಗಳ ಮೂಲಕ, ಅರ್ಹತಾ ಪರೀಕ್ಷೆಗಳಿಗೆ ಮುಂಚೆ ಇರಬೇಕಾದ ತರಬೇತಿ ಮತ್ತು ಪರೀಕ್ಷೆಗಳು ಸೇರಿದಂತೆ ಇರಬೇಕಾದ ತರಬೇತಿ ಮತ್ತು ಅರ್ಹತಾ ಪರೀಕ್ಷೆಗಳನ್ನು ನಿಯಮಿಸತಕ್ಕದ್ದು. ಶಿಕ್ಷಣ

ಮತ್ತು ಪರೀಕ್ಷೆಯು, ಸಾಧ್ಯವಾದಷ್ಟು ಮಟ್ಟಿಗೆ ಅಂಥ ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಭಾಷೆಗಳಲ್ಲಿ ನೀಡತಕ್ಕದ್ದೆಂದು ಅಥವಾ ನಡೆಸತಕ್ಕದ್ದೆಂದು ಅಂಥ ವಿನಿಯಮಗಳಲ್ಲಿ ಉಪಬಂಧ ಕಲ್ಪಿಸಬಹುದು.

(2) ಅರ್ಹತಾ ಪರೀಕ್ಷೆಯು, ಯಾವುವೇ ಸಂಸ್ಥೆಗಳು ಈ ಅಧಿನಿಯಮದ ಮೇರೆಗೆ ನೋಂದಣಿಯ ಹಕ್ಕನ್ನು ಪ್ರದಾನ ಮಾಡಲು ಒಂದು ಡಿಪ್ಲೋಮಾವನ್ನು ನೀಡುವ ಉದ್ದೇಶಕ್ಕಾಗಿ ಯಾವುದೇ ಔಷಧ ಪದ್ಧತಿಯಲ್ಲಿ ನಡೆಸುವ ಒಂದು ಪರೀಕ್ಷೆಯಾಗಿರತಕ್ಕದ್ದು. ಅದು ಮಂಡಲಿಯ ಶಿಫಾರಸ್ಸಿನ ಮೇಲೆ ಪರೀಕ್ಷೆಯನ್ನು ನಡೆಸಲು ಅಧಿಕಾರ ಹೊಂದಿರುವುದಾಗಿ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದು.

(3) ಔಷಧ ಪದ್ಧತಿಗಳ ವೈದ್ಯ ವೃತ್ತಿಯಲ್ಲಿ ತೊಡಗಲು ಸಾಕಷ್ಟು ಪ್ರಾವಿಣ್ಯತೆಯ ಮಟ್ಟವನ್ನು ಉಳಿಸಿಕೊಂಡು ಬರುವಂತೆ ಮಾಡುವುದು ಮಂಡಲಿಯ ಕರ್ತವ್ಯವಾಗಿರತಕ್ಕದ್ದು. ಅಂಥ ಮಟ್ಟವನ್ನು ಗಳಿಸುವ ಉದ್ದೇಶಕ್ಕಾಗಿ, ಮಂಡಲಿಯು, ಔಷಧ ಪದ್ಧತಿಗಳಲ್ಲಿ ಶಿಕ್ಷಣವನ್ನು ನೀಡುವ ಯಾವುದೇ ಸಂಸ್ಥೆಯ ಆಡಳಿತ ಮಂಡಲಿ ಅಥವಾ ಪ್ರಾಧಿಕಾರಗಳನ್ನು ಮತ್ತು (2)ನೇ ಉಪ ಪ್ರಕರಣದ ಮೇರೆಗೆ, ಅಧಿಕೃತಗೊಳಿಸಲಾಗಿರುವ ಅಥವಾ ಅಧಿಕೃತಗೊಳ್ಳಲು ಇಚ್ಛಿಸುವ ಯಾವುದೇ ಪರೀಕ್ಷಾ ಮಂಡಲಿಯನ್ನು ,–

(ಎ) ಯಾವುದೇ ಅರ್ಹತೆಯನ್ನು ನೀಡುವುದಕ್ಕೆ ಸಂಬಂಧಿಸಿದಂತೆ, ವಿನಿಯಮಗಳ ಮೂಲಕ ಗೊತ್ತುಪಡಿಸಲಾದ ಯಾವುದೇ ವ್ಯಾಸಂಗ ಕ್ರಮವನ್ನು, ಅಥವಾ ಅಂಥ ಮಂಡಲಿ ಅಥವಾ ಪ್ರಾಧಿಕಾರ ಅಥವಾ ಅಂಥ ಶಾಲೆ ಅಥವಾ ಕಾಲೇಜಿನ ಮೂಲಕ ನಡೆಸುವ ಪರೀಕ್ಷೆಗಳನ್ನು ನಡೆಸುವುದಕ್ಕೆ ಸಂಬಂಧಿಸಿದಂಥ ಮಂಡಲಿಯು ಅಗತ್ಯಪಡಿಸತಕ್ಕ ವಿವರಗಳನ್ನು ಒದಗಿಸುವಂತೆ; ಮತ್ತು

(ಬಿ) ಎಲ್ಲ ಅಥವಾ ಯಾವುವೇ ಅರ್ಹತಾ ಪರೀಕ್ಷೆಗಳಲ್ಲಿ ಅಥವಾ ಪೂರ್ವ ಪರೀಕ್ಷೆಗಳಲ್ಲಿ ಹಾಜರಾಗಲು ಮತ್ತು ಉಪಸ್ಥಿತರಿರಲು, ಮಂಡಲಿಯಿಂದ ನೇಮಿತರಾದ ಇನ್ಸ್‌ಪೆಕ್ಟರನ್ನು ಅನುಮತಿಸುವಂತೆ

– ಕೇಳುವ ಅಧಿಕಾರವನ್ನು ಹೊಂದಿರತಕ್ಕದ್ದು.

(4) ಇನ್ಸ್‌ಪೆಕ್ಟರುಗಳು, ಯಾವುದೇ ಪರೀಕ್ಷೆಯನ್ನು ನಡೆಸುವುದಕ್ಕೆ ಸಂಬಂಧಿಸಿದಂತೆ ಹಸ್ತಕ್ಷೇಪ ಮಾಡತಕ್ಕದ್ದಲ್ಲ. ಆದರೆ, ತಾವು ಹಾಜರಾದ ಪ್ರತಿಯೊಂದು ಪರೀಕ್ಷೆಯು ತೃಪ್ತಿಕರವಾದುದೇ ಅಥವಾ ಅತೃಪ್ತಿಕರವಾದುದೇ ಎಂಬ ಬಗ್ಗೆ ತಮ್ಮ ಅಭಿಪ್ರಾಯವನ್ನು ಮಂಡಲಿಗೆ ವರದಿ ಮಾಡುವುದು ಮತ್ತು ಮಂಡಲಿಯು ಅಗತ್ಯಪಡಿಸಹುದಾದ ಅಂಥ ಪರೀಕ್ಷೆಗಳಿಗೆ ಸಂಬಂಧಿಸಿದ ಇತರ ಯಾವುವೇ ವಿಷಯಗಳನ್ನು ವರದಿ ಮಾಡುವುದು ಅವರ ಕರ್ತವ್ಯವಾಗಿರತಕ್ಕದ್ದು.

(5) ಈ ಪ್ರಕರಣದ ಮೇರೆಗೆ ಪ್ರಾಧಿಕೃತಗೊಳಿಸಲಾದ ನಿಗಮಗಳ ಅಥವಾ ಸಂಸ್ಥೆಯ ಮೂಲಕ ನಡೆಸುವ ಪ್ರತಿಯೊಂದು ಅರ್ಹತಾ ಪರೀಕ್ಷೆ ಮತ್ತು ಪ್ರತಿಯೊಂದು ಪೂರ್ವ ಪರೀಕ್ಷೆಯ ಕಾರ್ಯ ವೈಖರಿಯನ್ನು ಇನ್ಸ್‌ಪೆಕ್ಟರುಗಳು, ಕಡೇ ಪಕ್ಷ ಮೂರು ವರ್ಷಗಳಿಗೆ ಒಮ್ಮೆ ಮತ್ತು ಮಂಡಲಿಯ ನಿರ್ದೇಶನದನುಸಾರ ಇನ್ನೂ ಹೆಚ್ಚು ಬಾರಿ ಪರಿಶೀಲಿಸತಕ್ಕದ್ದು.

(6) ಮಂಡಲಿಯು, ಯಾವುದರ ಸಂಬಂಧದಲ್ಲಿ, ಸದರಿ ವರದಿಯನ್ನು ಮಾಡಲಾಗಿದೆಯೋ ಆ ಪರೀಕ್ಷೆಯನ್ನು ನಡೆಸುವ ನಿಗಮಕ್ಕೆ ಪ್ರತಿಯೊಂದು ಅಂಥ ವರದಿಯ ಒಂದು ಪ್ರತಿಯನ್ನು ಕಳುಹಿಸತಕ್ಕದ್ದು ಮತ್ತು ಸದರಿ ನಿಗಮವು ಅದರ ಮೇಲೆ ಮಾಡಲಾದ ಯಾವುವೇ ಅಭಿಪ್ರಾಯೋಕ್ತಿಗಳೊಂದಿಗೆ ಅಂಥ ವರದಿಯ ಒಂದು ಪ್ರತಿಯನ್ನು ರಾಜ್ಯ ಸರ್ಕಾರಕ್ಕೆ ಸಹ ಕಳುಹಿಸತಕ್ಕದ್ದು.

(7) ಇನ್ಸ್‌ಪೆಕ್ಟರನು ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು ಮಂಡಲಿಯು ನಿರ್ಧರಿಸಬಹುದಾದ, ಮಂಡಲಿಯ ವೆಚ್ಚಗಳ ಭಾಗವಾಗಿ ಸಂದಾಯ ಮಾಡುವಂಥ ಪರಿಶ್ರಮ ಧನವನ್ನು ಸ್ವೀಕರಿಸತಕ್ಕದ್ದು.

**24. ಪರೀಕ್ಷೆಗಳಲ್ಲಿ ಸಂದರ್ಶಕರು.–** (1) ಮಂಡಲಿಯು, ಯಾವುದೇ ಸಂಸ್ಥೆಯು ನಡೆಸುವ ಯಾವುದೇ ಅಥವಾ ಎಲ್ಲ ಅರ್ಹತಾ ಪರೀಕ್ಷೆಗೆ ಹಾಜರಾಗಲು ತಾನು ಅಗತ್ಯವೆಂದು ಭಾವಿಸಬಹುದಾದಷ್ಟು ಸಂಖ್ಯೆಯ ಸಂದರ್ಶಕರನ್ನು ನೇಮಕ ಮಾಡಿಕೊಳ್ಳಬಹುದು.

(2) ಈ ಪ್ರಕರಣದ ಮೇರೆಗೆ ಯಾರೇ ವ್ಯಕ್ತಿಯನ್ನು, ಅವನು ಮಂಡಲಿಯ ಸದಸ್ಯನಾಗಿರಲಿ ಅಥವಾ ಇಲ್ಲದಿರಲಿ, ಸಂದರ್ಶಕನನ್ನಾಗಿ ನೇಮಕಮಾಡಿಕೊಳ್ಳಬಹುದು. ಆದರೆ, 23ನೇ ಪ್ರಕರಣದ ಮೇರೆಗೆ ಯಾವುದೇ ಪರೀಕ್ಷೆಗಾಗಿ ಇನ್ಸ್‌ಪೆಕ್ಟರನಾಗಿ ನೇಮಕಗೊಂಡ ವ್ಯಕ್ತಿಯನ್ನು, ಅದೇ ಪರೀಕ್ಷೆಯ ಸಂದರ್ಶಕನನ್ನಾಗಿ ನೇಮಕಮಾಡತಕ್ಕದ್ದಲ್ಲ.

(3) ಈ ಪ್ರಕರಣದ ಮೇರೆಗೆ ನೇಮಕಗೊಂಡ ಸಂದರ್ಶಕರು, ಯಾವುದೇ ಪರೀಕ್ಷೆ ನಡೆಸುವುದಕ್ಕೆ ಸಂಬಂಧಿಸಿದಂತೆ ಹಸ್ತಕ್ಷೇಪ ಮಾಡತಕ್ಕದ್ದಲ್ಲ. ಆದರೆ, ಅವರು ತಾನು ಹಾಜರಾದ ಪ್ರತಿಯೊಂದು ಪರೀಕ್ಷೆಯ ದಕ್ಷತೆಯ ಬಗ್ಗೆ ಮತ್ತು ಮಂಡಲಿಯು ವರದಿ ಸಲ್ಲಿಸುವಂತೆ ಅಗತ್ಯಪಡಿಸಲಾದ ಇತರ ಯಾವುವೇ ವಿಷಯಗಳ ಬಗ್ಗೆ ಮಂಡಲಿಯ ಅಧ್ಯಕ್ಷರಿಗೆ ವರದಿ ಮಾಡತಕ್ಕದ್ದು.

(4) ಸಂದರ್ಶಕರ ವರದಿಯನ್ನು, ಮಂಡಲಿಯ ಅಧ್ಯಕ್ಷರು ಯಾವುದೇ ನಿರ್ದಿಷ್ಟ ವಿಷಯದಲ್ಲಿ ಅನ್ಯಥಾ ನಿರ್ದೇಶಿಸಿದ ಹೊರತು ಗೋಪ್ಯವೆಂದು ಪರಿಗಣಿಸತಕ್ಕದ್ದು:

ಪರಂತು, ರಾಜ್ಯ ಸರ್ಕಾರವು, ಸಂದರ್ಶಕರ ವರದಿಯ ಒಂದು ಪ್ರತಿಯನ್ನು ಒದಗಿಸುವಂತೆ ಅಗತ್ಯಪಡಿಸಿದರೆ, ಮಂಡಲಿಯು ಅದನ್ನು ಒದಗಿಸತಕ್ಕದ್ದು.

**25. ಮಾನ್ಯತೆಯನ್ನು ಹಿಂತೆಗೆದುಕೊಳ್ಳುವುದು.–** (1) ಮಂಡಲಿಯ ಅಥವಾ 24ನೇ ಪ್ರಕರಣದ ಮೇರೆಗೆ ನೇಮಕಗೊಂಡ ಸಂದರ್ಶಕನ ಮೂಲಕ ಬಂದ ವರದಿಯ ಮೇಲೆ, ಯಾವುದೇ ಅರ್ಹತಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಲು ಅಥವಾ ಯಾವುದೇ ಅರ್ಹತಾ ಪರೀಕ್ಷೆಯಲ್ಲಿ ವಿದ್ಯಾರ್ಥಿಗಾಗಿ ಅಗತ್ಯಪಡಿಸಲಾದ ಪ್ರಾವಿಣ್ಯತಾ ಮಟ್ಟವು, ಸಂಬಂಧಪಟ್ಟ ಔಷಧ ಪದ್ಧತಿಯಲ್ಲಿ ಸಮರ್ಥವಾಗಿ ವೈದ್ಯ ವೃತ್ತಿಯಲ್ಲಿ ತೊಡಗಲು ಅಗತ್ಯವಿರುವ ಜ್ಞಾನ ಮತ್ತು ನೈಪುಣ್ಯತೆಯನ್ನು ಅಂಥ ಪರೀಕ್ಷೆಯಲ್ಲಿ ಉತ್ತೀರ್ಣರಾಗುವ ವ್ಯಕ್ತಿಗಳು ಗಳಿಸುವಂಥವುದಾಗಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದರೆ, ರಾಜ್ಯ ಸರ್ಕಾರವು, ತಾನು ಆಯ್ಕೆ ಮಾಡಿಕೊಳ್ಳಬಹುದಾದಂಥ ಷರಾಗಳೊಂದಿಗೆ, ಅಂಥ ವರದಿಯನ್ನು ಅಂಥ ಸಂಸ್ಥೆಗೆ ಕಳುಹಿಸತಕ್ಕದ್ದು ಮತ್ತು ಅದರಲ್ಲಿ ಯಾವ ಅವಧಿಯೊಳಗಾಗಿ ರಾಜ್ಯಸರ್ಕಾರಕ್ಕೆ ಅಂಥ ಸಂಸ್ಥೆಯು ವಿವರಣೆಯನ್ನು ಸಲ್ಲಿಸಬೇಕೆಂಬುದನ್ನು ತಿಳಿಸಿರಬೇಕು.

(2) ವಿವರಣೆಯನ್ನು ಸ್ವೀಕರಿಸಿದ ತರುವಾಯ ಅಥವಾ ಗೊತ್ತುಪಡಿಸಲಾದ ಅವಧಿಯೊಳಗಾಗಿ ಯಾವುದೇ ವಿವರಣೆಯನ್ನು ಸಲ್ಲಿಸದಿದ್ದಲ್ಲಿ, ಆ ಅವಧಿಯು ಮುಕ್ತಾಯವಾದ ಮೇಲೆ, ರಾಜ್ಯ ಸರ್ಕಾರವು, ತಾನು ಸೂಕ್ತವೆಂದು ಪರಿಗಣಿಸಬಹುದಾದಂಥ ಹೆಚ್ಚಿನ ವಿಚಾರಣೆ ಯಾವುದಾದರೂ ಇದ್ದರೆ, ಅದನ್ನು ಮಾಡಿದ ತರುವಾಯ, ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಲಾದ ದಿನಾಂಕಕ್ಕಿಂತ ಮುಂಚೆ ನೀಡಿದಾಗ ಮಾತ್ರವೇ ಅದು ಅರ್ಹತಾ ಪರೀಕ್ಷೆಯಾಗತಕ್ಕದ್ದೆಂದು ಅನುಸೂಚಿಯಲ್ಲಿ ಸದರಿ ಪರೀಕ್ಷೆಯ ಮುಂದೆ ನಮೂದು ಮಾಡತಕ್ಕದ್ದೆಂದು ನಿರ್ದೇಶಿಸಬಹುದು.

**26. ಶವ ಮಹಜರುಗಳು, ಮುಂತಾದವುಗಳಲ್ಲಿ ಸೇವೆ ಸಲ್ಲಿಸುವುದರಿಂದ ವಿನಾಯಿತಿ.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಪ್ರತಿಯೊಬ್ಬ ನೋಂದಾಯಿತ ವೈದ್ಯ ವೃತ್ತಿ ನಿರತನನ್ನು, ಅವನು ಅಪೇಕ್ಷಿಸಿದರೆ ದಂಡ ಪ್ರಕ್ರಿಯಾ ಸಂಹಿತೆ, 1898ರ (1898ರ ಕೇಂದ್ರ ಅಧಿನಿಯಮ 5) ಮೇರೆಗೆ ಯಾವುದೇ ಶವ ಮಹಜರಿನಲ್ಲಿ ಅಥವಾ ಜ್ಯೂರಿ ಸದಸ್ಯನಾಗಿ ಸೇವೆ ಸಲ್ಲಿಸುವುದರಿಂದ ವಿನಾಯಿತಿಗೊಳಿಸತಕ್ಕದ್ದು.

**27. ಮಂಡಲಿಯ ಸದಸ್ಯರಿಗೆ ಸಂದಾಯ ಮಾಡಬೇಕಾದ ಶುಲ್ಕಗಳು.–** ಮಂಡಲಿಯು, ಸದಸ್ಯರಿಗೆ ಸಭೆಯಲ್ಲಿ ಹಾಜರಾದುದಕ್ಕಾಗಿ ಕಾಲಕಾಲಕ್ಕೆ ನಿಯಮಿಸಬಹುದಾದಂಥ ಫೀಜುಗಳು ಮತ್ತು ಭತ್ಯೆಗಳನ್ನು ಮತ್ತು ಸೂಕ್ತ ಪ್ರಯಾಣ ಭತ್ಯೆಗಳನ್ನು ಸಂದಾಯ ಮಾಡತಕ್ಕದ್ದು.

**28. ಮಂಡಲಿಯ ಆದಾಯ ಮತ್ತು ವೆಚ್ಚಗಳು.–** (2) ಮಂಡಲಿಯ ಆದಾಯವು,–

(ಎ) ಈ ಅಧ್ಯಾಯದ ಮೇರೆಗೆ ಸ್ವೀಕರಿಸಲಾದ ಫೀಜುಗಳನ್ನು;

(ಬಿ) ಸರ್ಕಾರದಿಂದ ಸ್ವೀಕರಿಸಲಾದ ಅನುದಾನಗಳನ್ನು;

(ಸಿ) ಮಂಡಲಿಯಿಂದ ಸ್ವೀಕರಿಸಲಾದ ದೇಣಿಗೆಗಳು ಮತ್ತು ಇತರ ಮೊತ್ತಗಳನ್ನು

– ಒಳಗೊಳ್ಳತಕ್ಕದ್ದು.

(2) ಮಂಡಲಿಯ ವೆಚ್ಚಗಳು ಇನ್ಸ್‌ಪೆಕ್ಟರ್ ಸೇರಿದಂತೆ ಮಂಡಲಿಯಿಂದ ನೇಮಕಗೊಂಡ ರಿಜಿಸ್ಟ್ರಾರನ, ಸಿಬ್ಬಂದಿಯ ಸಂಬಳಗಳು ಮತ್ತು ಭತ್ಯೆಗಳು ಮತ್ತು ಮಂಡಲಿಯ ಸದಸ್ಯರಿಗೆ ಸಂದಾಯವಾಗುವ ಶುಲ್ಕ ಮತ್ತು ಭತ್ಯೆಗಳು ಮತ್ತು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ಅಗತ್ಯವಿರುವಂಥ ಇತರ ವೆಚ್ಚಗಳೂ ಒಳಗೊಳ್ಳತಕ್ಕದ್ದು.

**29. ವೈದ್ಯ ವೃತ್ತಿ ನಿರತರ ಪಟ್ಟಿಯ ಪ್ರಕಟಣೆ.–** (1) ರಿಜಿಸ್ಟ್ರಾರನು, ಪ್ರತಿವರ್ಷದ ಜೂನ್ 30ನೇ ದಿನಾಂಕದಂದು ಅಥವಾ ಅದಕ್ಕೂ ಮುಂಚೆ, ಆ ವರ್ಷದ ಜನವರಿ ಮೊದಲನೇ ದಿನಾಂಕದಂದು ರಿಜಿಸ್ಟರಿನಲ್ಲಿ ನಮೂದಿಸಿದ ಎಲ್ಲ ವೈದ್ಯ ವೃತ್ತಿ ನಿರತರ ಹೆಸರುಗಳು ಮತ್ತು ಅರ್ಹತೆಗಳ ಒಂದು ಸರಿಯಾದ ಪಟ್ಟಿಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು.

(2) (1)ನೇ ಉಪ ಪ್ರಕರಣದ ಮೇರೆಗೆ ಪ್ರಕಟವಾದ ಪಟ್ಟಿಯ ಒಂದು ಪ್ರತಿಯು, ಎಲ್ಲ ನ್ಯಾಯಾಲಯಗಳಲ್ಲಿ ಮತ್ತು ಎಲ್ಲ ನ್ಯಾಯಿಕ ಅಥವಾ ಅರೆ ನ್ಯಾಯಿಕ ವ್ಯವಹರಣೆಗಳಲ್ಲಿ ಅದರಲ್ಲಿ ನಿರ್ದಿಷ್ಟಪಡಿಸಲಾದ ವ್ಯಕ್ತಿಗಳು, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ನೋಂದಾಯಿತರಾಗಿರುವರೆಂಬುದಕ್ಕೆ ಸಾಕ್ಷ್ಯವಾಗಿರತಕ್ಕದ್ದು ಮತ್ತು ಅಂಥ ಪ್ರತಿಯಲ್ಲಿ ಯಾರೇ ವ್ಯಕ್ತಿಯ ಹೆಸರು ಇಲ್ಲದಿದ್ದಲ್ಲಿ, ತದ್ವಿರುದ್ಧವಾದುದು ರುಜುವಾತಾಗುವವರೆಗೆ, ಅಂಥ ವ್ಯಕ್ತಿಯು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ನೋಂದಾಯಿತನಲ್ಲವೆಂಬುದಕ್ಕೆ ಸಾಕ್ಷ್ಯ ವಾಗಿರತಕ್ಕದ್ದು :

ಪರಂತು, ಅಂಥ ಪ್ರತಿಯಲ್ಲಿ ಹೆಸರು ಇಲ್ಲದಿರುವ ಯಾರೇ ವ್ಯಕ್ತಿಯ ಸಂದರ್ಭದಲ್ಲಿ, ರಿಜಿಸ್ಟರಿನಲ್ಲಿ ಅಂಥ ವ್ಯಕ್ತಿಯ ಹೆಸರನ್ನು ನಮೂದಿಸಿದೆಯೆಂದು ರಿಜಿಸ್ಟ್ರಾರನು ಸಹಿ ಮಾಡಿರುವ ಪ್ರಮಾಣಿತ ಪ್ರತಿಯು, ಅಂಥ ವ್ಯಕ್ತಿಯು, ಈ ಅಧಿನಿಯಮದ ಉಪಬಂಧಗಳ ಮೇರೆಗೆ ನೋಂದಾಯಿತನಾಗಿರುವನೆಂಬುದಕ್ಕೆ ಸಾಕ್ಷ್ಯವಾಗಿರತಕ್ಕದ್ದು.

**30. ನಿಯಮಗಳು.–**(1) ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ, ಈ ಅಧ್ಯಾಯದ ಎಲ್ಲ ಉದ್ದೇಶಗಳನ್ನು ಅಥವಾ ಯಾವುದೇ ಉದ್ದೇಶವನ್ನು ನೆರವೇರಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯತೆಗೆ ಬಾಧಕವಾಗದಂತೆ, ರಾಜ್ಯ ಸರ್ಕಾರವು, ಈ ಮುಂದಿನ ಯಾವುವೇ ವಿಷಯಗಳಿಗಾಗಿ ನಿಯಮಗಳನ್ನು ರಚಿಸಬಹುದು:–

(ಎ) 3ನೇ ಪ್ರಕರಣದ (5)ನೇ ಉಪ ಪ್ರಕರಣದ ಮೇರೆಗೆ, ಅಧ್ಯಕ್ಷನ ಚುನಾವಣೆಯನ್ನು ನಡೆಸತಕ್ಕ ರೀತಿ;

(ಬಿ) 5ನೇ ಪ್ರಕರಣದ ಮೇರೆಗೆ ಚುನಾವಣೆಗಳನ್ನು ನಡೆಸತಕ್ಕ [1][XXX][1] ರೀತಿ;

1. 1972ರ ಅಧಿನಿಯಮ 13ರ ಮೂಲಕ 30.12.1972ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಸಿ) ಮಂಡಲಿಯು ಸಭೆಗಳನ್ನು ಕರೆಯತಕ್ಕ ಮತ್ತು ನಡೆಸತಕ್ಕ ರೀತಿ;

(ಡಿ) 14ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನ ಸಂಬಳ, ಭತ್ಯೆಗಳು ಮತ್ತು ಇತರ ಸೇವಾ ಷರತ್ತುಗಳು;

(ಇ) 15ನೇ ಪ್ರಕರಣದ ಮೇರೆಗಿನ ರಿಜಿಸ್ಟರಿನ ನಮೂನೆ ಮತ್ತು ಅದರಲ್ಲಿ ನಮೂದಿಸಬೇಕಾದ ವಿವರಗಳು;

(ಎಫ್) ರಿಜಿಸ್ಟರಿನಲ್ಲಿ ನಮೂದುಗಳನ್ನು ಮಾಡುವುದಕ್ಕಾಗಿ 15ನೇ ಪ್ರಕರಣದ (4) ನೇ ಉಪ ಪ್ರಕರಣದ ಮೇರೆಗೆ ವಿಧಿಸಬಹುದಾದ ಫೀಜುಗಳು;

(ಜಿ) 17ನೇ ಪ್ರಕರಣದ ಮೇರೆಗೆ ಮಂಡಲಿಯು, ರಿಜಿಸ್ಟ್ರಾರನ ತೀರ್ಮಾನದ ವಿರುದ್ಧದ ಅಪೀಲುಗಳನ್ನು ವಿಚಾರಣೆ ನಡೆಸತಕ್ಕ ರೀತಿ;

(ಎಚ್) ಅರ್ಜಿ ಸಲ್ಲಿಸಲು ಶುಲ್ಕಗಳು;

(ಐ) 19ನೇ ಪ್ರಕರಣದ ಮೇರೆಗೆ ನವೀಕರಣ ಫೀಜನ್ನು ಸಂದಾಯ ಮಾಡಿದ ಮೇಲೆ, ವೈದ್ಯ ವೃತ್ತಿ ನಿರತನ ಹೆಸರನ್ನು ಯಾವ ರೀತಿಯಲ್ಲಿ ಮತ್ತು ಯಾವ ಷರತ್ತುಗಳಿಗೊಳಪಟ್ಟು ರಿಜಿಸ್ಟರಿನಲ್ಲಿ ಅಥವಾ ಪಟ್ಟಿಯಲ್ಲಿ ಪುನಃ ನಮೂದಿಸಬಹುದು;

(ಜೆ) 27ನೇ ಪ್ರಕರಣದ ಮೇರೆಗೆ ಮಂಡಲಿಯ ಸದಸ್ಯರಿಗೆ ಸಂದಾಯ ಮಾಡಬೇಕಾದ ಶುಲ್ಕಗಳು ಮತ್ತು ಇತರ ಭತ್ಯೆಗಳು;

(ಕೆ) ಮಂಡಲಿಯ ಯಾವುವೇ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಬೇಕಾದ ರೀತಿ.

[1][(2ಎ) ಈ ಅಧಿನಿಯಮದ ಮೇರೆಗೆ ಯಾವುದೇ ನಿಯಮವನ್ನು ಪೂರ್ವಾನ್ವಯ ಪರಿಣಾಮಕಾರಿಯಾಗುವಂತೆ ರಚಿಸಹುದು ಮತ್ತು ಅಂಥ ಯಾವುದೇ ನಿಯಮವನ್ನು ರಚಿಸಿದಾಗ, ಅಂಥ ನಿಯಮವನ್ನು ರಚಿಸುವುದಕ್ಕಾಗಿರುವ ಕಾರಣಗಳನ್ನು ನಿರ್ದಿಷ್ಟಪಡಿಸುವ ಒಂದು ಹೇಳಿಕೆಯನ್ನು ನಿಯಮದೊಂದಿಗೆ (3)ನೇ ಉಪ ಪ್ರಕರಣದ ಮೇರೆಗೆ ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು. ಈ ಅಧಿನಿಯಮದ ಮೇರೆಗೆ ರಚಿತವಾದ ಎಲ್ಲ ನಿಯಮಗಳು, (3)ನೇ ಉಪ ಪ್ರಕರಣದ ಮೇರೆಗೆ ಮಾಡಲಾದ ಯಾವುದೇ ಮಾರ್ಪಾಡಿಗೆ ಒಳಪಟ್ಟು, ಈ ಅಧಿನಿಯಮದಲ್ಲಿ ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.][1]

1. 1966ರ ಅಧಿನಿಯಮ 9ರ ಮೂಲಕ 15.3.1962ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ಈ ಪ್ರಕರಣದ ಮೇರೆಗೆ ರಚಿತವಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದು ಬರುವ ಎರಡು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿವಸಗಳ ಅವಧಿಯವರೆಗೆ ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಹಾಗೆ ಮಂಡಿಸಲಾದ ಅಧಿವೇಶನದ ಅಥವಾ ನಿಕಟ ತರುವಾಯದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ, ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ, ಅಥವಾ ಆ ನಿಯಮವನ್ನು ರಚಿಸಬಾರದೆಂದು ಎರಡೂ ಸದನಗಳು ಒಪ್ಪಿದರೆ ಆ ನಿಯಮವು, ಸಂದರ್ಭಾನುಸಾರ, ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು, ಆ ನಿಯಮದ ಮೇರೆಗೆ, ಈ ಹಿಂದೆ ಮಾಡಲಾದ ಯಾವುದೇ ಕೃತ್ಯದ ಮಾನ್ಯತೆಗೆ ಬಾಧಕವುಂಟು ಮಾಡತಕ್ಕದ್ದಲ್ಲ.

**31. ವಿನಿಯಮಗಳು.–** (1) ಮಂಡಲಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು ಅಧಿಸೂಚನೆಯ ಮೂಲಕ ಈ ಅಧ್ಯಾಯ ಅಥವಾ ನಿಯಮಗಳಿಗೆ ಅಸಂಗತವಾಗದಂತೆ, ಈ ಮುಂದಿನ ಯಾವುವೇ ವಿಷಯಗಳಿಗಾಗಿ ವಿನಿಯಮಗಳನ್ನು ರಚಿಸಬಹುದು, ಎಂದರೆ:–

(ಎ) 11ನೇ ಪ್ರಕರಣದ ಮೇರೆಗೆ, ಮಂಡಲಿಯು ನಡೆಸತಕ್ಕ ಸಭೆಗಳ ಸಮಯ ಮತ್ತು ಸ್ಥಳ;

(ಬಿ) ರಿಜಿಸ್ಟ್ರಾರನನ್ನು ಹೊರತುಪಡಿಸಿ, 14ನೇ ಪ್ರಕರಣದ ಮೇರೆಗೆ ಇರುವ ಮಂಡಲಿಯ ಅಧಿಕಾರಿಗಳು ಮತ್ತು ನೌಕರರ ಸಂಬಳ, ಭತ್ಯೆಗಳು ಮತ್ತು ಇತರ ಸೇವಾ ಷರತ್ತುಗಳು;

(ಸಿ) ಈ ಅಧ್ಯಾಯದ ಉದ್ದೇಶಗಳನ್ನು ನೆರವೇರಿಸುವ ಉದ್ದೇಶಕ್ಕಾಗಿ ಅಗತ್ಯವಿರಬಹುದಾದ ಇತರ ಎಲ್ಲ ವಿಷಯಗಳು.

(2) ಈ ಅಧಿನಿಯಮದ ಮೇರೆಗೆ ರಚಿಸಲಾದ ಯಾವುದೇ ವಿನಿಯಮವನ್ನು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ರದ್ದುಗೊಳಿಸುವುದು ಅಥವಾ ಮಾರ್ಪಾಟುಗೊಳಿಸುವುದು ಕಾನೂನು ಸಮ್ಮತವಾಗಿರತಕ್ಕದ್ದು.

32. **ನಿಯಂತ್ರಣ.**–(1) ಮಂಡಲಿಯು, ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ತನಗೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಚಲಾಯಿಸಲು ವಿಫಲವಾಗಿದೆಯೆಂದು ಅಥವಾ ಅವನ್ನು ಅತಿಕ್ರಮಿಸಿದೆಯೆಂದು ಅಥವಾ ದುರುಪಯೋಗಪಡಿಸಿಕೊಂಡಿದೆಯೆಂದು, ಅಥವಾ ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ, ಮಂಡಲಿ ತನಗೆ ವಿಧಿಸಲಾದ ಯಾವುವೇ ಕರ್ತವ್ಯಗಳನ್ನು ಪಾಲಿಸಲು ವಿಫಲವಾಗಿದೆಯೆಂದು ಯಾವುದೇ ಕಾಲದಲ್ಲಿ ರಾಜ್ಯ ಸರ್ಕಾರಕ್ಕೆ ಕಂಡುಬಂದರೆ, ರಾಜ್ಯ ಸರ್ಕಾರವು, ಅಂಥ ವಿಫಲತೆ, ಅತಿಕ್ರಮಣ ಅಥವಾ ದುರುಪಯೋಗವನ್ನು ತೀವ್ರ ಸ್ವರೂಪದ್ದೆಂದು ಪರಿಗಣಿಸಿದರೆ, ಅದರ ವಿವರಗಳನ್ನು ಮಂಡಲಿಗೆ ಸೂಚಿಸಬಹುದು ಮತ್ತು ಈ ಸಂಬಂಧವಾಗಿ ರಾಜ್ಯ ಸರ್ಕಾರವು ನಿಗದಿಪಡಿಸಬಹುದಾದಂಥ ಕಾಲದೊಳಗೆ ಮಂಡಲಿಯು, ಅಂಥ ತಪ್ಪುವಿಕೆ, ಅತಿಕ್ರಮಣ ಅಥವಾ ದುರುಪಯೋಗವನ್ನು ಪರಿಹರಿಸಲು ವಿಫಲವಾದರೆ, ರಾಜ್ಯ ಸರ್ಕಾರವು ಮಂಡಲಿಯನ್ನು ವಿಸರ್ಜಿಸಬಹುದು ಮತ್ತು ತಾನು ಸೂಕ್ತವೆಂದು ಪರಿಗಣಿಸಬಹುದಾದಂಥ ವ್ಯಕ್ತಿಯು ಮಂಡಲಿಯ ಎಲ್ಲ ಅಥವಾ ಯಾವುವೇ ಅಧಿಕಾರಗಳು ಮತ್ತು ಕರ್ತವ್ಯಗಳನ್ನು ಚಲಾಯಿಸುವಂತೆ ಮತ್ತು ಅಂಥ ಅವಧಿಯವರೆಗೆ ನಿರ್ವಹಿಸುವಂತೆ ಮಾಡತಕ್ಕದ್ದು ಮತ್ತು ಆ ತರುವಾಯ ಈ ಅಧಿನಿಯಮದ ಉದ್ದೇಶಗಳಿಗಾಗಿ 3ನೇ ಪ್ರಕರಣದ ಮೇರೆಗೆ ಒಂದು ಹೊಸ ಮಂಡಲಿಯು ರಚನೆಯಾಗುವವರೆಗೆ ಮಂಡಲಿಯ ನಿಧಿಗಳು ಮತ್ತು ಸ್ವತ್ತುಗಳು ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.

(2) ರಾಜ್ಯ ಸರ್ಕಾರವು, (1)ನೇ ಉಪ ಪ್ರಕರಣದ ಮೇರೆಗೆ ಮಂಡಲಿಯನ್ನು ವಿಸರ್ಜಿಸಿದಾಗ, 3ನೇ ಪ್ರಕರಣದ ಮೇರೆಗೆ ಅನುಕೂಲಕರವಾದಷ್ಟು ಬೇಗನೆ ಒಂದು ಹೊಸ ಮಂಡಲಿಯನ್ನು ರಚಿಸಲು ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಆ ತರುವಾಯ (1) ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಸ್ವತ್ತು ಮತ್ತು ನಿಧಿಗಳನ್ನು ಹಾಗೆ ರಚಿತವಾದ ಮಂಡಲಿಯಲ್ಲಿ ಮರುನಿಹಿತಗೊಳಿಸತಕ್ಕದ್ದು.

(3) ಈ ಅಧಿನಿಯಮ, ನಿಯಮಗಳು ಅಥವಾ ವಿನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಮೇರೆಗೆ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಅಥವಾ ಯಾವುವೇ ಕರ್ತವ್ಯಗಳನ್ನು ನಿರ್ವಹಿಸಲು ಅಧಿಕಾರ ಪಡೆದ ಮಂಡಲಿಯನ್ನು ಅಥವಾ ಇತರ ಯಾವುದೇ ಪ್ರಾಧಿಕಾರವನ್ನು ಕಾನೂನು ಮಾನ್ಯವಾಗಿ ರಚಿಸಿಲ್ಲವೆಂದು ಅಥವಾ ನೇಮಕಗೊಂಡಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಯಾವುದೇ ಕಾಲದಲ್ಲಿ ಕಂಡುಬಂದರೆ, ರಾಜ್ಯ ಸರ್ಕಾರವು, ತಾನು ಸೂಕ್ತವೆಂದು ಪರಿಗಣಿಸಬಹುದಾದಂಥ ರೀತಿಯಲ್ಲಿ ಮತ್ತು ಆರು ತಿಂಗಳುಗಳನ್ನು ಮೀರದಂಥ ಅವಧಿಯವರೆಗೆ ಮತ್ತು ಅಂಥ ಷರತ್ತುಗಳಿಗೊಳಪಟ್ಟು ಅಂಥ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಅಥವಾ ಪ್ರಕಾರ್ಯಗಳನ್ನು ನಿರ್ವಹಿಸಲು ಅಂಥ ವ್ಯಕ್ತಿಯನ್ನು ನೇಮಿಸುವಂತೆ ಮಾಡಬಹುದು.

33. **ನಿರಸನ ಮತ್ತು ತೊಂದರೆಗಳನ್ನು ನಿವಾರಿಸುವ ಅಧಿಕಾರ.**– (1) [1][ಗುಲ್ಬರ್ಗಾ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ವೈದ್ಯಕೀಯ ಅಧಿನಿಯಮ, 1312 ಫಸಲಿ (1312 ಫಸಲಿ ಹೈದರಾಬಾದ್ ಅಧಿನಿಯಮ 1) ಮತ್ತು ಮುಂಬಯಿ ವೈದ್ಯಕೀಯ ನೋಂದಣಿ ಅಧಿನಿಯಮ, 1938 ನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.1.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) ಈ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಅಧಿನಿಯಮಗಳ ಉಪಬಂಧಗಳಿಂದ ಸದರಿ ಉಪಬಂಧಗಳಲ್ಲಿ ಬದಲಾವಣೆ ಉಂಟಾದ ಪರಿಣಾಮವಾಗಿ, ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೆ ತರುವಲ್ಲಿ ಯಾವುವೇ ತೊಂದರೆಗಳು ಉದ್ಭವಿಸಿದರೆ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ತೊಂದರೆಯ ನಿವಾರಣೆಗಾಗಿ ಅಗತ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರುವಂಥ ಉಪಬಂಧಗಳನ್ನು ರಚಿಸಬಹುದು.

## ಅಧ್ಯಾಯ –III

## ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳು

34. **ಈ ಅಧಿನಿಯಮ ಅಥವಾ ಕೆಲವು ಕಾನೂನುಗಳ ಮೇರೆಗೆ ನೋಂದಾಯಿತರಾಗದ ವೈದ್ಯಕೀಯ ವೃತ್ತಿ ನಿರತರು ವೈದ್ಯ ವೃತ್ತಿಯಲ್ಲಿ ತೊಡಗದಿರುವುದು, ಇತ್ಯಾದಿ.**–(1) (i) ಈ ಅಧಿನಿಯಮದ II ನೇ ಅಧ್ಯಾಯದ ಮೇರೆಗೆ ನೋಂದಾಯಿತನಾದ ವೈದ್ಯ ವೃತ್ತಿ ನಿರತನಲ್ಲದ (ii) [1][ಕರ್ನಾಟಕ][1] ವೈದ್ಯಕೀಯ ನೋಂದಣಿ ಅಧಿನಿಯಮ, 1961 ಅಥವಾ [1][ಕರ್ನಾಟಕ][1] ಹೋಮಿಯೋಪತಿ ವೈದ್ಯ ವೃತ್ತಿ ನಿರತರ ಅಧಿನಿಯಮ, 1961ರ ಮೇರೆಗೆ ನೋಂದಾಯಿತನಾದ ವೈದ್ಯ ವೃತ್ತಿ ನಿರತನಲ್ಲದ ಅಥವಾ ತತ್ಕಾಲದಲ್ಲಿ ಭಾರತ ವೈದ್ಯಕೀಯ ಕೌನ್ಸಿಲ್ ಅಧಿನಿಯಮ, 1956ರ ಮೇರೆಗೆ ನಿರ್ವಹಿಸಲಾಗುವ ಭಾರತೀಯ ವೈದ್ಯಕೀಯ ರಿಜಿಸ್ಟರ್‌ನಲ್ಲಿ ಹೆಸರು ಇರುವ ವೈದ್ಯ ವೃತ್ತಿ ನಿರತನಲ್ಲದ ; ಅಥವಾ (iii) 18ನೇ ಪ್ರಕರಣದಲ್ಲಿ ಹೇಳಲಾದ ಪಟ್ಟಿಯಲ್ಲಿ ಹೆಸರು ನಮೂದಿಸಿರುವ ವ್ಯಕ್ತಿಯಲ್ಲದ ಯಾರೇ ವ್ಯಕ್ತಿಯು, ಯಾವುದೇ ಔಷಧ, ಶಸ್ತ್ರ ಚಿಕಿತ್ಸೆ ಅಥವಾ ಸೂಲಗಿತ್ತಿ ಪದ್ಧತಿಯ ವೈಯಕ್ತಿಕ ಲಾಭಕ್ಕಾಗಿ ವೈದ್ಯ ವೃತ್ತಿ ನಿರತನಾಗಿ ನೇರವಾಗಿಯಾಗಲಿ ಅಥವಾ ಇಂಗಿತವಾಗಿಯಾಗಲಿ ವೈದ್ಯ ವೃತ್ತಿಯಲ್ಲಿ ತೊಡಗತಕ್ಕದ್ದಲ್ಲ ಅಥವಾ ವೃತ್ತಿಯಲ್ಲಿ ತೊಡಗಿರುವಂತೆ ತೋರ್ಪಡಿಸತಕ್ಕದ್ದಲ್ಲ.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) ಯಾವುದೇ ಮಾನವ ರೋಗ, ನೋವು, ಗಾಯ, ವಿಕಲತೆ ಅಥವಾ ದೇಹಸ್ಥಿತಿಗೆ ಸಂಬಂಧಿಸಿದಂತೆ ರೋಗವನ್ನು ಗುರುತಿಸಲು, ಚಿಕಿತ್ಸೆ ನೀಡಲು, ಶಸ್ತ್ರ ಚಿಕಿತ್ಸೆ ನಡೆಸಲು ಅಥವಾ ಔಷಧವನ್ನು ಅಥವಾ ಇತರ ಪರಿಹಾರವನ್ನು ಬರೆದುಕೊಡಲು ಅಥವಾ ಔಷಧ ನೀಡಲು ಸಮರ್ಥನಿರುವುದಾಗಿ ತೋರ್ಪಡಿಸಿಕೊಳ್ಳುವ ಅಥವಾ ಯಾವುದೇ ಜಾಹೀರಾತಿನ ಪ್ರಾತ್ಯಕ್ಷಿಕೆಯ ಪ್ರದರ್ಶನದ ಅಥವಾ ಶಿಕ್ಷಣದ ಮೂಲಕ ಯಾವುದೇ ರೀತಿಯಲ್ಲಿ ಅಥವಾ ಯಾವುವೇ ವಿಧಾನಗಳಿಂದ ಯಾವುದೇ ಮಾನವ ರೋಗ, ನೋವು, ಗಾಯ, ವಿಕಲತೆ ಅಥವಾ ದೇಹಸ್ಥಿತಿಗೆ ಸಂಬಂಧಿಸಿದಂತೆ ರೋಗವನ್ನು ಗುರುತಿಸಲು, ಚಿಕಿತ್ಸೆ ನೀಡಲು, ಶಸ್ತ್ರ ಚಿಕಿತ್ಸೆ ನಡೆಸಲು ಅಥವಾ ಔಷಧವನ್ನು ಅಥವಾ ಇತರ ಪರಿಹಾರವನ್ನು ಬರೆದುಕೊಡಲು ಸಿದ್ಧವಿರುವುದಾಗಿ ಹೇಳಿಕೊಳ್ಳುವ ಅಥವಾ ಒಪ್ಪಿಕೊಳ್ಳುವ ಯಾರೇ ವ್ಯಕ್ತಿಯನ್ನು (1)ನೇ ಉಪ ಪ್ರಕರಣದ ಅರ್ಥವ್ಯಾಪ್ತಿಯಲ್ಲಿ ಯಾವುದೇ ಔಷಧ ಪದ್ಧತಿಯಲ್ಲಿ ವೈದ್ಯ ವೃತ್ತಿ ನಿರತನೆಂದು ಭಾವಿಸತಕ್ಕದ್ದು:

ಪರಂತು, ಲೆನ್ಸ್‌ಗಳನ್ನು, ಕೃತಕ ಕಣ್ಣುಗಳನ್ನು, ಅವಯವಗಳನ್ನು ಅಥವಾ ಇತರ ಉಪಕರಣಗಳನ್ನು ಅಥವಾ ಸಾಧನ ಸಾಮಗ್ರಿಗಳನ್ನು ಯಂತ್ರದ ಮೂಲಕ ಜೋಡಿಸುವ ಅಥವಾ ಮಾರಾಟ ಮಾಡುವ ಅಥವಾ ಕನ್ನಡಕಗಳನ್ನು, ಕಣ್ಣುಗಾಜುಗಳನ್ನು ಅಥವಾ ಲೆನ್ಸ್‌ಗಳನ್ನು ತಯಾರಿಸಲು ಅಥವಾ ಅಳವಡಿಸಲು ಕಣ್ಣಿನ ಯಾಂತ್ರಿಕ ಪರೀಕ್ಷೆಯಲ್ಲಿ ತೊಡಗುವ ಅಥವಾ ಫಿಸಿಯೋಥೆರಪಿಯಲ್ಲಿ ತೊಡಗುವ ಅಥವಾ ಕರ ಪಾದ ಚಿಕಿತ್ಸೆ ನೀಡುವ ಅಥವಾ ಸ್ವಂತ ಲಾಭಕ್ಕಲ್ಲದೆ ಚಿಕಿತ್ಸೆ ನೀಡುವ ಅಥವಾ ಪರಂಪರಾಗತ ಗೃಹ ವೈದ್ಯದ ಚಿಕಿತ್ಸೆ ನೀಡುವ ಯಾರೇ ವ್ಯಕ್ತಿಯನ್ನು ಈ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ವೈದ್ಯ ವೃತ್ತಿ ನಿರತನೆಂದು ಭಾವಿಸತಕ್ಕದ್ದಲ್ಲ.

ವಿವರಣೆ: (2)ನೇ ಉಪ ಪ್ರಕರಣದ ಉದ್ದೇಶಕ್ಕಾಗಿ,–

(ಎ) ' ಜಾಹೀರಾತು' ಎಂಬುದರಲ್ಲಿ ಯಾವುದೇ ಪದ, ಪತ್ರ, ನೋಟೀಸು, ಸುತ್ತೋಲೆ, ಚಿತ್ರ, ರೇಖಾಚಿತ್ರ, ಮಾದರಿ, ಚಿಹ್ನೆ, ಪ್ರಕಟಣಾ ಪತ್ರ, ಫಲಕ ಅಥವಾ ಇತರ ದಸ್ತಾವೇಜನ್ನು ಮತ್ತು ಮೌಖಿಕವಾಗಿ ಅಥವಾ ಬೆಳಕು, ಶಬ್ದ, ಹೊಗೆಯನ್ನು ಉತ್ಪತ್ತಿ ಮಾಡುವ ಅಥವಾ ಪ್ರಸರಣ ಮಾಡುವ ಮೂಲಕ ಮಾಡಲಾದ ಪ್ರಕಟಣೆ ಅಥವಾ ಇತರ ಶ್ರವಣ ಮತ್ತು ದೃಶ್ಯ ಮಾಧ್ಯಮದ ಮೂಲಕ ಮಾಡಲಾದ ನಿರೂಪಣೆ ಒಳಗೊಳ್ಳುತ್ತದೆ; ಮತ್ತು

(ಬಿ) 'ಫಿಸಿಯೋಥೆರಪಿ' ಎಂದರೆ, ಮಾನವ ರೋಗ, ನೋವು, ಗಾಯ, ವಿಕಲತೆ ಅಥವಾ ದೇಹಸ್ಥಿತಿಯನ್ನು ಅಂಗಮರ್ಧನ ಮಾಡುವ ಮೂಲಕ ಅಥವಾ ಇತರ ಶಾರೀರಿಕ ವಿಧಾನಗಳಿಂದ ಚಿಕಿತ್ಸೆ ಮಾಡುವುದು, ಆದರೆ ಇದರಲ್ಲಿ ಮೂಳೆ ಜೋಡಣೆ ಒಳಗೊಳ್ಳುವುದಿಲ್ಲ.

**35. ಈ ಅಧಿನಿಯಮ, ಮೊದಲಾದವುಗಳ ಮೇರೆಗೆ ನೋಂದಾಯಿತರಾಗದ ವೈದ್ಯಕೀಯ ವೃತ್ತಿ ನಿರತರು ಜನನ ಅಥವಾ ಮರಣ ಪ್ರಮಾಣ ಪತ್ರ, ಮುಂತಾದವುಗಳಿಗೆ ಸಹಿ ಮಾಡುವಂತಿಲ್ಲ.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ 11ನೇ ಅಧ್ಯಾಯದ ಮೇರೆಗೆ ನೋಂದಾಯಿತನಾದ ವೈದ್ಯ ವೃತ್ತಿನಿರತನಲ್ಲದ ಅಥವಾ [1][ಕರ್ನಾಟಕ][1] ವೈದ್ಯಕೀಯ ನೋಂದಣಿ ಅಧಿನಿಯಮ, 1961 ಅಥವಾ [1][ಕರ್ನಾಟಕ][1] ಹೋಮಿಯೋಪತಿ ವೈದ್ಯ ವೃತ್ತಿ ನಿರತರ ಅಧಿನಿಯಮ, 1961ರ ಮೇರೆಗೆ ನೋಂದಾಯಿತನಾದ ವೈದ್ಯ ವೃತ್ತಿ ನಿರತನಲ್ಲದ ಅಥವಾ ಭಾರತೀಯ ವೈದ್ಯಕೀಯ ಪರಿಷತ್ತು ಅಧಿನಿಯಮ, 1956ರ ಮೇರೆಗೆ ನಿರ್ವಹಿಸುವ ಭಾರತೀಯ ವೈದ್ಯಕೀಯ ರಿಜಿಸ್ಟರ್‌ನಲ್ಲಿ ಹೆಸರು ಇರುವ ವೈದ್ಯ ವೃತ್ತಿ ನಿರತನಲ್ಲದ ಯಾರೇ ವ್ಯಕ್ತಿಯು,–

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಎ) ಸೂಕ್ತ ಅರ್ಹತೆ ಪಡೆದಿರುವ ವೈದ್ಯಕೀಯ ವೃತ್ತಿ ನಿರತನು ಸಹಿ ಮಾಡಬೇಕೆಂದು ಅಥವಾ ಅಧಿಕೃತಗೊಳಿಸಬೇಕೆಂದು ಯಾವುದೇ ಕಾನೂನು ಅಥವಾ ನಿಯಮಗಳ ಮೂಲಕ ಅಗತ್ಯಪಡಿಸಲಾದ ಜನನ ಅಥವಾ ಮರಣ ಪ್ರಮಾಣಪತ್ರಕ್ಕೆ ಸಹಿ ಮಾಡತಕ್ಕದ್ದಲ್ಲ ಅಥವಾ ಅಧಿಕೃತಗೊಳಿಸತಕ್ಕದ್ದಲ್ಲ ;

(ಬಿ) ಸೂಕ್ತ ಅರ್ಹತೆ ಪಡೆದಿರುವ ವೈದ್ಯಕೀಯ ವೃತ್ತಿ ನಿರತನು ಸಹಿ ಮಾಡಬೇಕೆಂದು ಅಥವಾ ಅಧಿಕೃತಗೊಳಿಸಬೇಕೆಂದು ಯಾವುದೇ ಕಾನೂನು ಅಥವಾ ನಿಯಮದ ಮೂಲಕ ಅಗತ್ಯಪಡಿಸಿದ ವೈದ್ಯಕೀಯ ಅಥವಾ ದೇಹದಾರ್ಢ್ಯತಾ ಪ್ರಮಾಣಪತ್ರಕ್ಕೆ ಸಹಿ ಮಾಡತಕ್ಕದ್ದಲ್ಲ ಅಥವಾ ಅಧಿಕೃತಗೊಳಿಸತಕ್ಕದ್ದಲ್ಲ ;

(ಸಿ) ಔಷಧ, ಶಸ್ತ್ರ ಚಿಕಿತ್ಸೆ ಅಥವಾ ಸೂಲಗಿತ್ತಿ ವೃತ್ತಿಗೆ ಸಂಬಂಧಿಸಿದ ಯಾವುದೇ ವಿಷಯದ ಮೇಲೆ, ಭಾರತ ಸಾಕ್ಷ್ಯ ಅಧಿನಿಯಮ, 1872ರ 45ನೇ ಪ್ರಕರಣದ ಮೇರೆಗೆ, ಯಾವುದೇ ಒಂದು ಶವ ಮಹಜರಿನಲ್ಲಿ ಅಥವಾ ಯಾವುದೇ ಕಾನೂನು ನ್ಯಾಯಾಲಯದಲ್ಲಿ ತಜ್ಞನೆಂದು ಸಾಕ್ಷ್ಯ ನೀಡಲು ಅರ್ಹನಿರತಕ್ಕದ್ದಲ್ಲ.

**36. ದಂಡ.–** 34 ಅಥವಾ 35 ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು, ಅಪರಾಧ ನಿರ್ಣೀತನಾದ ಬಳಿಕ ಮೊದಲ ಅಪರಾಧಕ್ಕಾಗಿ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ, ಎರಡನೇ ಅಪರಾಧಕ್ಕಾಗಿ ಐದು ನೂರು ರೂಪಾಯಿಗಳವರೆಗೂ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಅಂಥ ಎರಡನೇ ಅಪರಾಧಕ್ಕಾಗಿ ಅವನು ಅಪರಾಧ ನಿರ್ಣೀತನಾದ ತರುವಾಯದ ಪ್ರತಿಯೊಂದು ಅಪರಾಧಕ್ಕಾಗಿ ಎರಡು ವರ್ಷಗಳನ್ನು ಮೀರದ ಅವಧಿಯ ಕಾರಾವಾಸದಿಂದ ಮತ್ತು ಒಂದು ಸಾವಿರ ರೂಪಾಯಿಗಳನ್ನು ಮೀರದ ದಂಡದಿಂದ ದಂಡಿತನಾಗತಕ್ಕದ್ದು.

[1][36ಎ. **ಕಣ್ಣಿನ ಪೊರೆಯನ್ನು ತೆಗೆಯುವುದರ ನಿಷೇಧ.–** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, 35ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ವೈದ್ಯ ವೃತ್ತಿ ನಿರತನಲ್ಲದ ಯಾರೇ ವ್ಯಕ್ತಿಯು, ಕಣ್ಣಿನ ಪೊರೆಯಿಂದ ಬಳಲುತ್ತಿರುವ ವ್ಯಕ್ತಿಗೆ ದೃಷ್ಟಿಕೊಡಲು, ಆ ವ್ಯಕ್ತಿಯ ಸಮ್ಮತಿ ಪಡೆದು ಅಥವಾ ಇಲ್ಲದೆ, ಭೌತಿಕ ಸಾಧನದ ಮೂಲಕ ಅಥವಾ ಕಣ್ಣಿನೊಳಗೆ ಕೈ ಹಾಕುವ ಮೂಲಕ ಕಣ್ಣಿನ ಪೊರೆ ತೆಗೆಯತಕ್ಕದ್ದಲ್ಲ ಅಥವಾ ಕಣ್ಣಿನ ಪೊರೆ ತೆಗೆಯಲು ಪ್ರಯತ್ನಿಸತಕ್ಕದ್ದಲ್ಲ ಅಥವಾ ಒಪ್ಪತಕ್ಕದ್ದಲ್ಲ ಅಥವಾ ಸಿದ್ಧನಿರುವುದಾಗಿ ಹೇಳತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಅಥವಾ ಸದರಿ ಉಪಬಂಧಗಳ ಉಲ್ಲಂಘನೆಗೆ ದುಷ್ಪ್ರೇರಿಸುವ ಯಾರೇ ಆದರೂ, ಅಪರಾಧ ಸಿದ್ಧವಾದ ಬಳಿಕ ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

(3) ಯಾರೇ ಪೊಲೀಸ್ ಅಧಿಕಾರಿಯು, (2) ನೇ ಉಪ ಪ್ರಕರಣದ ಮೇರೆಗೆ, ದಂಡನೀಯ ಅಪರಾಧವನ್ನು ಮಾಡಿದ್ದಾನೆಂದು ಸಂಶಯ ಪಡಲು ಯುಕ್ತ ಕಾರಣವಿರುವ ಯಾರೇ ವ್ಯಕ್ತಿಯನ್ನು ವಾರೆಂಟ್ ಇಲ್ಲದೆ ದಸ್ತಗಿರಿ ಮಾಡಬಹುದು.

(4) ಈ ಪ್ರಕರಣದ ಮೇರೆಗೆ ಮ್ಯಾಜಿಸ್ಟ್ರೇಟ್ ಅವರು,–

(ಎ) ಪೊಲೀಸ್ ಅಧಿಕಾರಿಯ ವರದಿಯ ಮೇಲೆ; ಅಥವಾ

(ಬಿ) ಇತರ ಯಾರೇ ವ್ಯಕ್ತಿಯ ಮಾಹಿತಿಯ ಮೇಲೆ; ಅಥವಾ

(ಸಿ) ಅಂಥ ಅಪರಾಧವು ಘಟಿಸಿದೆಯೆಂಬ ತನ್ನ ಸ್ವಂತ ತಿಳಿವಳಿಕೆಯ ಮೇಲೆ ಅಥವಾ ಸಂಶಯದ ಮೇಲೆ

– ಅಪರಾಧವನ್ನು ಅವಗಾಹನೆಗೆ ತೆಗೆದುಕೊಳ್ಳಬಹುದು:

ಪರಂತು, ಅರೋಪಿಸಲಾದ ಅಪರಾಧವು, ಅದು ಘಟಿಸಲಾಗಿದೆಯೆಂದು ಹೇಳಲಾದ ದಿನಾಂಕದ ತರುವಾಯದ ಆರು ತಿಂಗಳು ಗಳನ್ನು ಮೀರಿದ್ದಲ್ಲಿ ಯಾವುದೇ ಅವಗಾಹನೆಗೆ ತೆಗೆದುಕೊಳ್ಳತಕ್ಕದ್ದಲ್ಲ.][1]

1. 1966ರ ಅಧಿನಿಯಮ 32ರ ಮೂಲಕ 22.12.1966ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**37. ನಕಲಿ ಪದವಿಗಳನ್ನು , ಡಿಪ್ಲೊಮೊಗಳನ್ನು ಅಥವಾ ಲೈಸೆನ್ಸ್‍ಗಳನ್ನು ಪ್ರದಾನ ಮಾಡುವುದು, ನೀಡುವುದು ಅಥವಾ ಒದಗಿಸುವುದು ಒಂದು ಅಪರಾಧ.–** (1) ಈ ಅಧಿನಿಯಮದ 22ನೇ ಪ್ರಕರಣದ ಮೇರೆಗೆ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕೇಂದ್ರ ಅಧಿನಿಯಮ ಅಥವಾ ರಾಜ್ಯ ಅಧಿನಿಯಮದ ಮೇರೆಗೆ ಅಧಿಕೃತಗೊಳಿಸಲಾದ ನಿಕಾಯ ಅಥವಾ ಸಂಸ್ಥೆಯಲ್ಲದ ಯಾರೇ ವ್ಯಕ್ತಿಯು, ಸಂದರ್ಭಾನುಸಾರ ಈ ಅಧಿನಿಯಮದ ಮೇರೆಗೆ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕೇಂದ್ರ ಅಧಿನಿಯಮ ಅಥವಾ ರಾಜ್ಯ ಅಧಿನಿಯಮದ ಮೇರೆಗೆ, ಪ್ರಾಧಿಕೃತವಾದ ನಿಕಾಯ ಅಥವಾ ಸಂಸ್ಥೆಯು ನೀಡುವ ಯಾವುದೇ ಡಿಗ್ರಿ, ಡಿಪ್ಲೊಮ, ಪ್ರಮಾಣಪತ್ರ ಅಥವಾ ಲೈಸೆನ್ಸಿನ ತದ್ರೂಪಾದ ಅಥವಾ ನಕಲಿಯಾಗಿರುವ ಯಾವುದೇ ಡಿಗ್ರಿ, ಡಿಪ್ಲೊಮ ಪ್ರಮಾಣ ಪತ್ರ ಅಥವಾ ಲೈಸೆನ್ಸ್‍ನ್ನು ಪ್ರದಾನ ಮಾಡತಕ್ಕದ್ದಲ್ಲ, ನೀಡತಕ್ಕದ್ದಲ್ಲ ಅಥವಾ ಒದಗಿಸತಕ್ಕದ್ದಲ್ಲ ಅಥವಾ ಪ್ರದಾನ ಮಾಡಲು, ನೀಡಲು ಅಥವಾ ಒದಗಿಸಲು ತನ್ನನ್ನು ತಾನು ಹಕ್ಕುಳ್ಳವನೆಂದು ಅಧಿಕಾರಯುತವಾಗಿ ಹೇಳಿಕೊಳ್ಳತಕ್ಕದ್ದಲ್ಲ.

(2) ಈ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ಆದರೂ, ಅಪರಾಧ ನಿರ್ಣಯವಾದ ಬಳಿಕ, ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(3) (i) ಈ ಪ್ರಕರಣದ ಮೇರೆಗೆ ಒಂದು ಅಪರಾಧವನ್ನು ಮಾಡುವ ವ್ಯಕ್ತಿಯು ಒಂದು ಕಂಪನಿಯಾಗಿದ್ದರೆ, ಕಂಪನಿಯನ್ನು ಹಾಗೂ ಅಪರಾಧವು ನಡೆದ ಸಮಯದಲ್ಲಿ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ವ್ಯವಹಾರಗಳನ್ನು ನಡೆಸಲು ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ತಮ್ಮ ವಿರುದ್ಧ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತರಾಗತಕ್ಕದ್ದು:

ಪರಂತು, ಈ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಆ ಅಪರಾಧವು ತನ್ನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ರುಜುವಾತುಪಡಿಸಿದ ಅಂಥ ವ್ಯಕ್ತಿಯನ್ನು ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(ii) (i)ನೇ ಖಂಡದಲ್ಲಿ ಏನೇ ಒಳಗೊಂಡಿದ್ದರೂ, ಕಂಪನಿಯು, ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಮಾಡಿರುವಲ್ಲಿ ಮತ್ತು ಆ ಅಪರಾಧವು ಕಂಪನಿಯ ಯಾವೊಬ್ಬ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ರುಜುವಾತಾದಲ್ಲಿ ಅಥವಾ ನಿರ್ಲಕ್ಷ್ಯತೆಯ ಕಾರಣದಿಂದ ನಡೆಯಿತೆಂದು ಹೇಳಬಹುದಾದಲ್ಲಿ ಅಂಥ ನಿರ್ದೇಶಕನನ್ನು, ವ್ಯವಸ್ಥಾಪಕನನ್ನು, ಕಾರ್ಯದರ್ಶಿಯನ್ನು ಅಥವಾ ಇತರ ಅಧಿಕಾರಿಯನ್ನು ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ತಮ್ಮ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ದಂಡಿತರಾಗತಕ್ಕದ್ದು.

**ವಿವರಣೆ:** ಈ ಉಪ ಪ್ರಕರಣದ ಉದ್ದೇಶಕ್ಕಾಗಿ,–

(ಎ) "ಕಂಪನಿ" ಎಂದರೆ, ಯಾವುದೇ ನಿಗಮಿತ ನಿಕಾಯ ಮತ್ತು ವ್ಯಕ್ತಿಗಳ ಒಂದು ಫರ್ಮು ಅಥವಾ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿನ ಸಂಬಂಧದಲ್ಲಿ "ನಿರ್ದೇಶಕ" ಎಂದರೆ, ಫರ್ಮಿನ ಒಬ್ಬ ಪಾಲುದಾರ.

**38. ಅಧಿಕೃತವಾಗದ ಹೊರತು, ಯಾರೇ ವ್ಯಕ್ತಿಯ ಹೆಸರಿಗೆ ಯಾವುದೇ ಪದವಿ, ವಿವರಣೆ, ಮುಂತಾದವನ್ನು ಸೇರಿಸುವುದಕ್ಕೆ ನಿಷೇಧ.–** (1) ಯಾರೇ ವ್ಯಕ್ತಿಯು, ಯಾವುದೇ ಔಷಧ ಪದ್ಧತಿಯಲ್ಲಿ, ವೈದ್ಯ ವೃತ್ತಿಯಲ್ಲಿ ತೊಡಗಲು ವಿದ್ಯಾರ್ಹತೆಯಾಗಿರುವ ಪದವಿ, ಡಿಪ್ಲೊಮಾ, ಲೈಸೆನ್ಸ್ ಅಥವಾ ಪ್ರಮಾಣಪತ್ರವನ್ನು ಹೊಂದಿರುವನೆಂದು ಅರ್ಥಕೊಡುವ ಯಾವುದೇ ಬಿರುದು, ವಿವರಣೆ, ಅಕ್ಷರಗಳು ಅಥವಾ ಸಂಕೇತಾಕ್ಷರಗಳನ್ನು,–

(ಎ) ವಾಸ್ತವವಾಗಿ ಅವನು ಅಂಥ ಪದವಿ, ಡಿಪ್ಲೊಮಾ, ಲೈಸೆನ್ಸ್ ಅಥವಾ ಪ್ರಮಾಣಪತ್ರವನ್ನು ಹೊಂದಿದ್ದ ಹೊರತು; ಮತ್ತು

(ಬಿ) ಅಂಥ ಪದವಿ, ಡಿಪ್ಲೊಮಾ, ಲೈಸೆನ್ಸ್ ಅಥವಾ ಪ್ರಮಾಣಪತ್ರವು,–

(i) ಭಾರತ ಅಥವಾ ಅದರ ಯಾವುದೇ ಭಾಗದಲ್ಲಿ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ಮಾನ್ಯತೆ ಪಡೆದ ಹೊರತು; ಅಥವಾ

(ii) 37 ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ನಿಕಾಯ ಅಥವಾ ಸಂಸ್ಥೆಯು ಪ್ರದಾನಮಾಡಿದ, ನೀಡಿದ ಅಥವಾ ಒದಗಿಸಿದ ಹೊರತು; ಅಥವಾ

(iii) (i) ಅಥವಾ (ii) ನೇ ಉಪಖಂಡದ ಅಡಿಯಲ್ಲಿ ಅವು ಬರದಿದ್ದ ಸಂದರ್ಭದಲ್ಲಿ, ಅಂಥ ಪದವಿ, ಡಿಪ್ಲೊಮಾ, ಲೈಸೆನ್ಸ್ ಅಥವಾ ಪ್ರಮಾಣಪತ್ರವನ್ನು ಪ್ರದಾನ ಮಾಡಲು, ನೀಡಲು ಅಥವಾ ಒದಗಿಸಲು ರಾಜ್ಯ ಸರ್ಕಾರದಿಂದ ಸಕ್ಷಮವಾಗಿ ಅಧಿಕಾರ ಪಡೆದ ಅಥವಾ ಮಾನ್ಯತೆ ಪಡೆದ ಪ್ರಾಧಿಕಾರದಿಂದ ಪ್ರದಾನ ಮಾಡಿದ, ನೀಡಿದ ಅಥವಾ ಒದಗಿಸಿದ ಹೊರತು

–ತನ್ನ ಹೆಸರಿಗೆ ಸೇರಿಸತಕ್ಕದ್ದಲ್ಲ.

(2) (1) ನೇ ಉಪ ಪ್ರಕರಣವನ್ನು ಉಲ್ಲಂಘಿಸುವ ಯಾರೇ ಆದರೂ, ಅಪರಾಧ ನಿರ್ಣಯವಾದ ಬಳಿಕ, ಮೊದಲ ಅಪರಾಧದ ಸಂದರ್ಭದಲ್ಲಿ, ಎರಡು ನೂರಾ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಆ ತರುವಾಯದ ಅಪರಾಧದ ಸಂದರ್ಭದಲ್ಲಿ, ಐದು ನೂರು ರೂಪಾಯಿಗಳವರೆಗೂ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**39. ಉಳಿಸುವಿಕೆ.–** 34 ಮತ್ತು 36 ನೇ ಪ್ರಕರಣಗಳಲ್ಲಿರುವುದು ಯಾವುದೂ,–

(ಎ) ತನ್ನ ವೃತ್ತಿಯನ್ನು ದಂತಶಾಸ್ತ್ರ ಕಲೆಗೆ ಸೀಮಿತಗೊಳಿಸಿರುವ; ಅಥವಾ

(ಬಿ) ಪ್ರಸೂತಿಯ ಸಂದರ್ಭದಲ್ಲಿ ನೆರವಾಗುವ ಅಥವಾ ಅಂಥ ಕೆಲಸದ ಅವಧಿಯಲ್ಲಿ ಅಗತ್ಯಪಡಿಸಲಾದಂಥ ಇತರ ಸೇವೆಗಳನ್ನು ಸಲ್ಲಿಸುತ್ತಿರುವ ಯಾವುದೇ ಕೇಂದ್ರ ಅಧಿನಿಯಮ ಅಥವಾ ರಾಜ್ಯ ಅಧಿನಿಯಮದ ಮೇರೆಗೆ ನೋಂದಾಯಿತವಾದ ದಾದಿ, ಸೂಲಗಿತ್ತಿ ಅಥವಾ ಆರೋಗ್ಯ ಸಂದರ್ಶಕಿಯಾಗಿರುವ ಅಥವಾ ದಾಯಿಯಾಗಿರುವ

– ಯಾರೇ ವ್ಯಕ್ತಿಗೆ ಅನ್ವಯಿಸತಕ್ಕದ್ದಲ್ಲ.

**40. ಈ ಅಧಿನಿಯಮದ ಮೇರೆಗಿನ ಅಪರಾಧಗಳನ್ನು ಅವಗಾಹನೆಗೆ ತೆಗೆದುಕೊಳ್ಳಲು ಮತ್ತು ಅಪರಾಧಗಳ ಅಧಿವಿಚಾರಣೆ ನಡೆಸಲು ಸಕ್ಷಮವಾದ ನ್ಯಾಯಾಲಯ.–** (1) ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟ್ ನ್ಯಾಯಾಲಯವಲ್ಲದ ಯಾವುದೇ ನ್ಯಾಯಾಲಯವು ಅವಗಾಹನೆಗೆ ತೆಗೆದುಕೊಳ್ಳತಕ್ಕದ್ದಲ್ಲ ಅಥವಾ ಅಧಿವಿಚಾರಣೆ ನಡೆಸತಕ್ಕದ್ದಲ್ಲ.

(2) ಯಾವುದೇ ನ್ಯಾಯಾಲಯವು, ಈ ಅಧಿನಿಯಮದ ಮೇರೆಗಿನ ಯಾವುದೇ ಅಪರಾಧವನ್ನು ಈ ಸಂಬಂಧವಾಗಿ ರಾಜ್ಯ ಸರ್ಕಾರದಿಂದ ಅಧಿಕಾರ ಪಡೆದ ಅಧಿಕಾರಿಯು ಲಿಖಿತದಲ್ಲಿ ದೂರು ನೀಡಿದ ಹೊರತು ಅವಗಾಹನೆಗೆ ತೆಗೆದುಕೊಳ್ಳತಕ್ಕದ್ದಲ್ಲ.

**41. ಈ ಅಧಿನಿಯಮದ ಮೇರೆಗೆ ಕಾರ್ಯನಿರ್ವಹಿಸುವ ವ್ಯಕ್ತಿಗಳಿಗೆ ನಷ್ಟ ಭರ್ತಿ.–** ಈ ಅಧಿನಿಯಮ, ನಿಯಮಗಳು ಅಥವಾ ವಿನಿಯಮಗಳ ಮೇರೆಗೆ, ಸದ್ಭಾವನೆಯಿಂದ ಮಾಡಲಾದ ಅಥವಾ ಮಾಡಲು ಉದ್ದೇಶಿಸಲಾದ ಯಾವುದೇ ಕೃತ್ಯಕ್ಕಾಗಿ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಕಾನೂನು ವ್ಯವಹರಣೆ ಅಥವಾ ಇತರ ನ್ಯಾಯಿಕ ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**42. ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿ.–** ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ರಾಜ್ಯ ಸರ್ಕಾರ ಅಥವಾ ಮಂಡಲಿ ಅಥವಾ ರಿಜಿಸ್ಟ್ರಾರರಿಗೆ ಪ್ರದತ್ತವಾದ ಯಾವುದೇ ಅಧಿಕಾರವನ್ನು ಚಲಾಯಿಸಿ ಮಾಡಲಾದ ಯಾವುದೇ ಕೃತ್ಯವನ್ನು ಯಾವುದೇ ಸಿವಿಲ್ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ.

[1][ಅನುಸೂಚಿ

(21 ನೇ ಪ್ರಕರಣವನ್ನು ನೋಡಿ)

ನೋಂದಣಿಗೆ ಅರ್ಹತೆಗಳು

| | ವಿಶ್ವವಿದ್ಯಾಲಯ, ಮಂಡಲಿ ಅಥವಾ ವೈದ್ಯಕೀಯ ಸಂಸ್ಥೆಯ ಹೆಸರು | ಮಾನ್ಯತೆ ಪಡೆದ ವೈದ್ಯಕೀಯ ಅರ್ಹತೆ | ನೋಂದಣಿಯ ಸಂಕ್ಷಿಪ್ತ ರೂಪ | ಷರಾ |
|---|---|---|---|---|
| | 1 | 2 | 3 | 4 |
| | | ಆಯುರ್ವೇದ<br>ಆಂಧ್ರ | | |
| 1. | ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್ ಹೈದರಾಬಾದ್, ಆಂಧ್ರಪ್ರದೇಶ. | ಗ್ರಾಜುಯೇಟ್ ಆಫ್ ದಿ ಕಾಲೇಜ್ ಆಫ್ ಆಯುರ್ವೇದಿಕ್ ಮೆಡಿಸಿನ್.<br>ಗ್ರಾಜುಯೇಟ್ ಆಫ್ ದಿ ಕಾಲೇಜ್ ಆಫ್ ಇಂಟಿಗ್ರೇಟೆಡ್ ಮೆಡಿಸಿನ್.<br>ಆಯುರ್ವೇದ ವಿಶಾರದ.<br>ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಜಿ.ಸಿ.ಎ.ಎಂ.<br>ಜಿ.ಸಿ.ಐ.ಎಂ.<br>ಎ.ವಿ.ವಿ.<br>ಬಿ.ಎ.ಎಂ. ಅಂಡ್ ಎಸ್ | |
| 1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 173, ಪಿಐಎಂ. 82, ದಿನಾಂಕ 9.7.1986ರ ಮೂಲಕ ಅನುಸೂಚಿಯನ್ನು ಪ್ರತಿಯೋಜಿಸಲಾಗಿದೆ. ಪುಟ 48 ರಲ್ಲಿದೆ. | | | | |
| 2. | ಆಂಧ್ರ ಆಯುರ್ವೇದ ಪರಿಷದ್, ವಿಜಯವಾಡ (ಪರೀಕ್ಷಾಸಂಸ್ಥೆ). | ವೈದ್ಯ ವಿದ್ವಾನ್ | | |
| 3. | ಶ್ರೀ ವೆಂಕಟೇಶ್ವರ ಆಯುರ್ವೇದ ಕಲಾಶಾಲಾ, ವಿಜಯವಾಡ. | ಆಯುರ್ವೇದಾಲಂಕಾರ<br>ಆಯುರ್ವೇದ ಕಲಾನಿಧಿ<br>ಡಿಪ್ಲೊಮೊ ಇನ್ ಆಯುರ್ವೇದಿಕ್ ಮೆಡಿಸಿನ್ | ಡಿ.ಎ.ಎಂ.ಎಸ್ | |
| 4. | ಶ್ರೀ ರಂಗಾಚಾರ್ಯ ರಾಂ ಮೋಹನ್ ಆಯುರ್ವೇದಿಕ್ ಕಾಲೇಜ್, ಗುಂಟೂರು, ಆಂಧ್ರಪ್ರದೇಶ. | ಆಯುರ್ವೇದ ಪ್ರವೀಣ | | |
| 5. | ಆಂಧ್ರ ವಿಶ್ವವಿದ್ಯಾನಿಲಯ, ವಾಲ್ಟೈರ್. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ | ಬಿ.ಎ.ಎಂ.ಎಸ್. | 1976 ರಿಂದ 1977ರ ವರೆಗೆ. |
| 6. | ನಾಗಾರ್ಜುನ ವಿಶ್ವವಿದ್ಯಾನಿಲಯ, ನಾಗಾರ್ಜುನ ನಗರ. | ಆಯುರ್ವೇದ ಆಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ) | ಬಿ.ಎ.ಎಂ.ಎಸ್. | 1977 ರಿಂದ ಮುಂದಕ್ಕೆ. |

| | 1 | 2 | 3 | 4 |
|---|---|---|---|---|
| 7. | ಕಾಕತೀಯ ವಿಶ್ವವಿದ್ಯಾನಿಲಯ, ವಾರಂಗಲ್. | ಆಯುರ್ವೇದ ಆಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ) | ಬಿ.ಎ.ಎಂ.ಎಸ್. | 1976 ರಿಂದ ಮುಂದಕ್ಕೆ. |
| 8. | ಒಸ್ಮಾನಿಯಾ ವಿಶ್ವವಿದ್ಯಾನಿಲಯ, ಹೈದರಾಬಾದ್. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ<br>ಡಾಕ್ಟರ್ ಆಫ್ ಮೆಡಿಸಿನ್ (ಆಯುರ್ವೇದ). | ಬಿ.ಎ.ಎಂ.ಎಸ್.<br>ಎಂ.ಡಿ.(ಆಯುರ್ವೇದ) | 1976 ರಿಂದ ಮುಂದಕ್ಕೆ<br>1974 ರಿಂದ ಮುಂದಕ್ಕೆ |

**ಅಸ್ಸಾಂ**

| | | | | |
|---|---|---|---|---|
| 1. | ಬೋರ್ಡ್ ಆಫ್ ಆಯುರ್ವೇದಿಕ್ ಮೆಡಿಸಿನ್, ಅಸ್ಸಾಂ. | ಡಿಪ್ಲೊಮ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ | ಡಿ.ಎ.ಎಂ.ಎಸ್ | ---------- |
| 2. | ಗೌಹಾತಿ ವಿಶ್ವವಿದ್ಯಾನಿಲಯ, ಗೌಹಾತಿ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ (ಆಯುರ್ವೇದಾಚಾರ್ಯ). | ಬಿ.ಎ.ಎಂ.ಎಸ್ | 1[1987ರ ವರೆಗೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 82 ಪಿಟಿಡಿ 88, ದಿನಾಂಕ 21/23.02.1988 ರ ಮೂಲಕ ಪ್ರತಿಯೋಜಿಸಲಾಗಿದೆ. ಪುಟ 48 ರಲ್ಲಿದೆ.

**ಬಿಹಾರ್**

| | | | | |
|---|---|---|---|---|
| 1. | ಸ್ಟೇಟ್ ಫ್ಯಾಕಲ್ಟಿ ಆಫ್ ಆರ್ಯುವೇದಿಕ್ ಅಂಡ್ ಯುನಾನಿ ಮೆಡಿಸಿನ್ಸ್ ಪಾಟ್ನ, ಬಿಹಾರ್. | ಗ್ರಾಜುಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ | ಜಿ.ಎ.ಎಂ.ಎಸ್. | 1953 ರಿಂದ ಮುಂದಕ್ಕೆ |
| 2. | ಗೌರ್ನಮೆಂಟ್ ಆಯುರ್ವೇದಿಕ್ ಸ್ಕೂಲ್, ಪಾಟ್ನಾ, ಬಿಹಾರ(ಹಿಂದಿನ). | ಆಯುರ್ವೇದಾಚಾರ್ಯ | ------ | |
| 3. | ಗೌರ್ನಮೆಂಟ್ ಆಯುರ್ವೇದಿಕ್ ಕಾಲೇಜ್, ಪಾಟ್ನಾ, ಬಿಹಾರ್. | ಆಯುರ್ವೇದಾಚಾರ್ಯ | | |
| 4. | ಕಾಮೇಶ್ವರ ಸಿಂಗ್ ಧರ್ಬಾಂಗ ಸಂಸ್ಕೃತ ವಿಶ್ವವಿದ್ಯಾನಿಲಯ, ಧರ್ಬಾಂಗ. | ಪ್ರಾಣಾಚಾರ್ಯ (ಬಿ.ಎ.ಎಂ.ಎಸ್) ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ).<br>[1][ಆಯುರ್ವೇದಾಚಾರ್ಯ. | ಬಿ.ಎ.ಎಂ.ಎಸ್. | 1962 ರಿಂದ ಮುಂದಕ್ಕೆ<br>1981 ರಿಂದ ಮುಂದಕ್ಕೆ<br>1962 ರಿಂದ 1979ರ ವರೆಗೆ][1] |
| 5. | ಬಿಹಾರ ವಿಶ್ವವಿದ್ಯಾನಿಲಯ ಮುಜಾಫರ್ ಪುರ. | ಗ್ರಾಜುಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ) | ಜಿ.ಎ.ಎಂ.ಎಸ್.<br>ಬಿ.ಎ.ಎಂ.ಎಸ್. | 1973 ರಿಂದ 1981 ರ ವರೆಗೆ<br>1981 ರಿಂದ ಮುಂದಕ್ಕೆ |

| | 1 | 2 | 3 | 4 |
|---|---|---|---|---|
| 6. | ಯು.ಪಿ. ಆಯುರ್ವೇದ ಮಹಾ ವಿದ್ಯಾಲಯ | ಗೃಹಿತಾರ್ವೇದ ಶಾಸ್ತ್ರ | ಎಲ್.ಎಂ.ಎ. | 1972 ಕ್ಕೆ ಮುಂಚೆ |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 82 ಪಿಟಿಡಿ 88, ದಿನಾಂಕ 21/23.02.1988 ರ ಮೂಲಕ ಸೇರಿಸಲಾಗಿದೆ. ಪುಟ 48 ರಲ್ಲಿದೆ.

**ದೆಹಲಿ**

| | | | | |
|---|---|---|---|---|
| 1. | ಆಯುರ್ವೇದಿಕ್ ಅಂಡ್ ಯುನಾನಿ ತಿಬ್ಬೀಯ ಕಾಲೇಜು, ದೆಹಲಿ. | ಆಯುರ್ವೇದಾಚಾರ್ಯ ಧನ್ವಂತರಿ.<br>ಭಿಷಗಾಚಾರ್ಯ ಧನ್ವಂತರಿ,<br>ವೈದ್ಯ ಧಾತ್ರಿ.. | ----------<br>----------<br>---------- | 1958ರ ವರೆಗೆ<br>1958ರ ವರೆಗೆ<br>1958ರ ವರೆಗೆ |
| 2. | ಬೋರ್ಡ್ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ದೆಹಲಿ ಅಡ್ಮಿನಿಸ್ಟ್ರೇಷನ್. | ಬ್ಯಾಚುಲರ್ ಇನ್ ಇಂಡಿಯನ್ ಮೆಡಿಸಿನ್ ಅಂಡ್ ಸರ್ಜರಿ | ಬಿ.ಐ.ಎಂ.ಎಸ್. | 1958ರಿಂದ 1963ರ ವರೆಗೆ |
| | | ಆಯುರ್ವೇದಾಚಾರ್ಯ ಧನ್ವಂತರಿ (ಡಿಪ್ಲೋಮಾ ಇನ್ ಇಂಡಿಯನ್ ಮೆಡಿಸಿನ್ ಅಂಡ್ ಸರ್ಜರಿ) | ಡಿ.ಐ.ಎಂ.ಎಸ್. | 1956ರಿಂದ 1960ರ ವರೆಗೆ |
| | | ಭಿಷಗಾಚಾರ್ಯ ಧನ್ವಂತರಿ | -------- | ------ |
| 3. | ಆಲ್ ಇಂಡಿಯಾ ಆಯುರ್ವೇದ ವಿದ್ಯಾಪೀಠ, ದೆಹಲಿ. | ಆಯುರ್ವೇದ ವಿಶಾರದ.<br>ಆಯುರ್ವೇದ ಭಿಶಖ್.<br>ವೈದ್ಯಾಚಾರ್ಯ.<br>ಪ್ರಜಾವೈದ್ಯ ಪ್ರಿಕ್ಷಾ.<br>ವೈದ್ಯ ವಿಶಾರದ.<br>ಆಯುರ್ವೇದಾಚಾರ್ಯ.<br>ಆಯುರ್ವೇದ ಶಾಸ್ತ್ರಿ. | | 1974 ರಿಂದ ಮುಂದಕ್ಕೆ |
| 4. | ಬನ್ವಾರಿಲಾಲ್ ಆಯುರ್ವೇದಿಕ್ ವಿದ್ಯಾಲಯ, ದೆಹಲಿ. | ವೈದ್ – ರಾಜ್.<br>ಭಿಷಗಾಚಾರ್ಯ.<br>ಆಯುರ್ವೇದಾಚಾರ್ಯ. | | 1958ರ ವರೆಗೆ<br>1958ರ ವರೆಗೆ<br>1958ರ ವರೆಗೆ |
| 5. | ಎಕ್ಸಾಮಿನಿಂಗ್ ಬಾಡಿ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ದೆಹಲಿ. | ಬ್ಯಾಚುಲರ್ ಇನ್ ಇಂಡಿಯನ್ ಮೆಡಿಸಿನ್ ಅಂಡ್ ಸರ್ಜರಿ.<br>ಆಯುರ್ವೇದಾಚಾರ್ಯ ಧನ್ವಂತರಿ. | ಬಿ.ಐ.ಎಂ.ಎಸ್.<br>-------- | 1963 ರಿಂದ ಮುಂದಕ್ಕೆ<br>-------- |
| | | [1][ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ) | ಬಿ.ಎ.ಎಂ.ಎಸ್. | 1978ರಿಂದ ಮುಂದಕ್ಕೆ |
| | | ಆಯುರ್ವೇದಾಚಾರ್ಯ | ಎಬಿಎಂಎಸ್ | 1975 ರಿಂದ 1978 ರವರೆಗೆ][1] |
| | | (ಆಯುರ್ವೇದಿಕ್ ಬ್ಯಾಚುಲರ್ ಆಫ್ ಮೆಡಿಸಿನ್ ಆಂಡ್ ಸರ್ಜರಿ). | | |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 82 ಪಿಟಿಡಿ 88, ದಿನಾಂಕ 21/23.02.1988 ರ ಮೂಲಕ ಸೇರಿಸಲಾಗಿದೆ. ಪುಟ 48 ರಲ್ಲಿದೆ.

| | 1 | 2 | 3 | 4 |
|---|---|---|---|---|
| 6. | ದೆಹಲಿ ವಿಶ್ವವಿದ್ಯಾನಿಲಯ, ದೆಹಲಿ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1979ರಿಂದ ಮುಂದಕ್ಕೆ |
| [1][7. | ಸನಾತನ ಧರ್ಮ ಆಯುರ್ವೇದಾಚಾರ್ಯ (ಪ್ರೇಮಿಗಿರಿ ಆಯುರ್ವೇದಿಕ್ ಕಾಲೇಜ್), (ಲಾಹೋರ್) ದೆಹಲಿ. | ---- | ಎಂ.ಎ.ಎಂ.ಎಸ್. | 1951ರಿಂದ 1957ರ ವರೆಗೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 82 ಪಿಟಿಡಿ 88, ದಿನಾಂಕ 21/23.02.1988 ರ ಮೂಲಕ ಸೇರಿಸಲಾಗಿದೆ. ಪುಟ 48 ರಲ್ಲಿದೆ.

**ಗುಜರಾತ್**

| | | | | |
|---|---|---|---|---|
| 1. | ಗುಜರಾತ್ ವಿಶ್ವವಿದ್ಯಾನಿಲಯ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಆ್ಯಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1961 ರಿಂದ 1968ರ ವರೆಗೆ |
| 2. | ಎಂ.ಎಸ್ ವಿಶ್ವವಿದ್ಯಾನಿಲಯ, ಬರೋಡ. | ಆಯುರ್ವೇದ – ವಿಶಾರದ. | ---- | 1933ರ ವರೆಗೆ |
| 3. | ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಗುಜರಾತ್. | ಗ್ರಾಜುಯೇಟ್ ಆಫ್ ದಿ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಮೆಡಿಸಿನ್. | ಜಿ.ಎಫ್.ಎ.ಎಂ. | --------- |
| 4. | ದಿ ಕಮಿಟಿ ಫಾರ್ ಶುದ್ಧ ಆಯುರ್ವೇದಿಕ್ ಕೋರ್ಸ್ ಗುಜರಾತ್, ಅಹಮದಾಬಾದ್. | ಆಯುರ್ವೇದ ಪ್ರವೀಣ | ಡಿ.ಎಸ್.ಎ.ಸಿ. | --------- |
| 5. | ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್, ಸೌರಾಷ್ಟ್ರ | ಆಯುರ್ವೇದ ವಿಶಾರದ | -------- | -------- |
| 6. | ಪೋಸ್ಟ್ ಗ್ರಾಜುಯೇಟ್ ಟ್ರೈನಿಂಗ್ ಸೆಂಟರ್ ಇನ್ ಆಯುರ್ವೇದ, ಜಾಮ್‌ನಗರ. | ಹೈಯರ್ ಪ್ರೊಫಿಶಿಯೆನ್ಸಿ ಇನ್– ಆಯುರ್ವೇದ. | ಎಚ್.ಪಿ.ಎ. | ---------- |
| 7. | ಸರ್ವನಾಮಾಸ ದಕ್ಷಿಣ ಪರೀಕ್ಷಾ ಸಮಿತಿ, ಬರೋಡ. | ಆಯುರ್ವೇದ ಉತ್ತಮ.<br>ಆಯುರ್ವೇದ ಮಧ್ಯಮ. | --------<br>-------- | --------<br>-------- |
| 8. | ರಾಜಕೀಯ ಸಂಸ್ಕೃತ ಮಹಾವಿದ್ಯಾಲಯ, ಬರೋಡ. | ಆಯುರ್ವೇದ– ವಿಶಾರದ. | ------ | ------- |

| | 1 | 2 | 3 | 4 |
|---|---|---|---|---|
| 9. | ಯು.ಪಿ. ಆಯುರ್ವೇದ ಮಹಾವಿದ್ಯಾನಿಲಯ, ಪಾಟ್ನಾ (ಬರೋಡ ರಾಜ್ಯ). | ಗೃಹೀತ್ ಆಯುರ್ವೇದ ಶಾಸ್ತ್ರ . ಡಿಪ್ಲೋಮಾ ಇನ್ ಆಯುರ್ವೇದಿಕ್ ಮೆಡಿಸಿನ್ ಗೃಹೀತ್ ಆಯುರ್ವೇದ ಶಾಸ್ತ್ರ. | ಡಿ.ಎ.ಎಂ.<br>ಎಲ್.ಎ.ಎಂ. | ------<br>1942ರ ವರೆಗೆ |
| 10 | ಗುಜರಾತ್ ಆಯುರ್ವೇದ ವಿಶ್ವವಿದ್ಯಾನಿಲಯ, ಜಾಮ್‌ನಗರ್. | ಆಯುರ್ವೇದಾಚಾರ್ಯ.<br>ಪ್ರಾಣಾಚಾರ್ಯ<br>ಡಾಕ್ಟರ್ ಆಫ್ ಫಿಲಾಸಫಿ (ಆಯುರ್ವೇದ)<br>ಡಾಕ್ಟರ್ ಆಫ್ ಮೆಡಿಸಿನ್.<br>ಡಾಕ್ಟರ್ ಆಫ್ ಲಿಟರೇಚರ್ (ಆಯುರ್ವೇದ).<br>ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎಸ್.ಎ.ಎಂ.<br>ಎಂ.ಎಸ್.ಎ.ಎಂ.<br>ಪಿ.ಎಚ್.ಡಿ. (ಆಯುರ್ವೇದ)<br>ಎಂ.ಡಿ. (ಆಯುರ್ವೇದ)<br>ಡಿ.ಲಿಟ್ (ಆಯುರ್ವೇದ)<br>ಬಿ.ಎ.ಎಂ.ಎಸ್. | 1968ರಿಂದ<br>1982ರವರೆಗೆ<br>1974 ರ ವರೆಗೆ<br>1977 ರಿಂದ ಮುಂದಕ್ಕೆ<br>1973ರಿಂದ ಮುಂದಕ್ಕೆ<br>1976ರಿಂದ ಮುಂದಕ್ಕೆ<br>1982ರಿಂದ ಮುಂದಕ್ಕೆ |

1[ಹರಿಯಾಣ

| | | | | |
|---|---|---|---|---|
| 1. | ಕುರುಕ್ಷೇತ್ರ ವಿಶ್ವವಿದ್ಯಾನಿಲಯ, ಕುರುಕ್ಷೇತ್ರ. | ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎ.ಎಂ.ಎಸ್. | 1982ರಿಂದ ಮುಂದಕ್ಕೆ |
| 2. | ಮಹರ್ಷಿ ದಯಾನಂದ ವಿಶ್ವವಿದ್ಯಾನಿಲಯ. ರೋಹತಕ್ | ಆಯುರ್ವೇದಾಚಾರ್ಯ (ಗ್ರಾಜುಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಆಂಡ್ ಸರ್ಜರಿ).<br>ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ) | ಜಿ.ಎ.ಎಂ.ಎಸ್.<br>ಬಿ.ಎ.ಎಂ.ಎಸ್. | 1977 ರಿಂದ 1983ರ ವರೆಗೆ<br>1982ರಿಂದ ಮುಂದಕ್ಕೆ |
| 3. | ಹರಿಯಾಣ ಸ್ಟೇಟ್ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ ಆಫ್ ಮೆಡಿಸಿನ್, ಚಂಡೀಗರ್ | ಆಯುರ್ವೇದಾಚಾರ್ಯ (ಗ್ರಾಜುಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಆಂಡ್ ಸರ್ಜರಿ). | ಜಿ.ಎ.ಎಂ.ಎಸ್. | 1971ರಿಂದ 1976ರ ವರೆಗೆ]1 |

1. ಅಧಿಸೂಚನೆ ಸಂಖ್ಯೆ ಎಚ್‌ಎಫ್ ಡಬ್ಲ್ಯೂ 82 ಪಿಟಿಡಿ 88, ದಿನಾಂಕ 21/23.12.1988 ರ ಮೂಲಕ ಸೇರಿಸಲಾಗಿದೆ. ಪುಟ 49ರಲ್ಲಿದೆ.

| | | | | |
|---|---|---|---|---|
| 1. | ಜಮ್ಮು ಮತ್ತು ಕಾಶ್ಮೀರ ವಿಶ್ವವಿದ್ಯಾನಿಲಯ<br>1[ 2. XXX ]1<br>1[ 3. XXX ]1 | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1968 ರಿಂದ ಪ್ರದಾನ ಮಾಡಲಾದುದು. |

1. ಅಧಿಸೂಚನೆ ಸಂಖ್ಯೆ ಎಚ್‌ಎಫ್ ಡಬ್ಲ್ಯೂ 82 ಪಿಟಿಡಿ 88, ದಿನಾಂಕ 21/23.12.1988 ರ ಮೂಲಕ ಬಿಟ್ಟುಬಿಡಲಾಗಿದೆ. ಪುಟ 49 ರಲ್ಲಿದೆ.

ಹಿಮಾಚಲ ಪ್ರದೇಶ

| | | | | |
|---|---|---|---|---|
| 1[1. | ಹಿಮಾಚಲ ಪ್ರದೇಶ ವಿಶ್ವವಿದ್ಯಾನಿಲಯ, ಸಿಮ್ಲಾ. | ಗ್ರಾಜುಯೇಟ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. ಆಯುರ್ವೇದಾಚಾರ್ಯ. ಆಯುರ್ವೇದಾಚಾರ್ಯ<br>(ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಆಂಡ್ ಸರ್ಜರಿ). | ಜಿ.ಎ.ಎಂ.ಎಸ್.<br>ಬಿ.ಎ.ಎಂ.ಎಸ್. | 1986ರವರೆಗೆ ಮಾತ್ರ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪಡೆದ ಪದವಿ.<br>1986ರ ವರೆಗೆ ಮಾತ್ರ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪಡೆದ ಪದವಿ. –1987 ರ ವರೆಗೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 82 ಪಿಟಿಡಿ 88 ದಿನಾಂಕ:21.23–12–1988ರ ಮೂಲಕ ಪ್ರತಿಯೋಜಿಸಲಾಗಿದೆ. ಪುಟ 49 ರಲ್ಲಿದೆ.

1[ಕರ್ನಾಟಕ

| | | | | |
|---|---|---|---|---|
| 1. | ಭಾರತೀಯ ವೈದ್ಯ ಪದ್ಧತಿಗಳ ಅಧ್ಯಯನ ಮಂಡಲಿ, ಕರ್ನಾಟಕ, ಬೆಂಗಳೂರು. | ಗ್ರಾಜುಯೇಟ್ ಕೋರ್ಸ್ ಆಫ್ ಇಂಡಿಯನ್ ಮೆಡಿಸಿನ್. | ಜಿ.ಸಿ.ಐ.ಎಂ. | 1964ರಿಂದ ಮುಂದಕ್ಕೆ |
| 2. | ಭಾರತೀಯ ವೈದ್ಯ ಪದ್ಧತಿಗಳ ಅಧ್ಯಯನ ಮಂಡಲಿ, ಕರ್ನಾಟಕ, ಬೆಂಗಳೂರು. | ಆಯುರ್ವೇದ ಪ್ರವೀಣ. | ಡಿ.ಎಸ್.ಎ.ಸಿ. | 1958ರಿಂದ ಮುಂದಕ್ಕೆ |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 82 ಪಿಟಿಡಿ 88 ದಿನಾಂಕ:21/23–12–1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| 3. | ಸರ್ಕಾರಿ ಆಯುರ್ವೇದ ಮತ್ತು ಯುನಾನಿ ಕಾಲೇಜ್, ಮೈಸೂರು. | ಆಯುರ್ವೇದ ವಿದ್ವತ್ (ಲೈಸೆನ್ಸಿಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಎಲ್.ಎ.ಎಂ.ಎಸ್. | 1928ರಿಂದ 1953ರ ವರೆಗೆ |
| 4. | ಭಾರತೀಯ ವೈದ್ಯ ಪದ್ಧತಿಗಳ ಅಧ್ಯಯನ ಮಂಡಲಿ,ಕರ್ನಾಟಕ ರಾಜ್ಯ, ಬೆಂಗಳೂರು. | ಆಯುರ್ವೇದ ವಿದ್ವತ್ (ಲೈಸೆನ್ಸಿಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಎಲ್.ಎ.ಎಂ.ಎಸ್. | 1958ರಿಂದ ಮುಂದಕ್ಕೆ |
| 5. | ಭಾರತೀಯ ವೈದ್ಯ ಪದ್ಧತಿಗಳ ಕೇಂದ್ರ ಮಂಡಲಿ, ಮೈಸೂರು. | ಆಯುರ್ವೇದ ವಿದ್ವತ್ (ಲೈಸೆನ್ಸಿಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಎಲ್.ಎ.ಎಂ.ಎಸ್. | 1953ರಿಂದ 1958ರ ವರೆಗೆ |
| 6. | ತಾರಾನಾಥ್ ಆಯುರ್ವೇದ ವಿದ್ಯಾಪೀಠ, ಬಳ್ಳಾರಿ. | ಆಯುರ್ವೇದ ವಿದ್ವತ್ (ಲೈಸೆನ್ಸಿಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). (ವೈದ್ಯ ಪ್ರವೀಣ) | ಎಲ್.ಎ.ಎಂ.ಎಸ್. | 1953 ರಿಂದ 1958ರ ವರೆಗೆ |

| | 1 | 2 | 3 | 4 |
|---|---|---|---|---|
| 7. | ಮೈಸೂರು ಮಹಾರಾಜರ ಸಂಸ್ಕೃತ ಸಮಿತಿ ಅಥವಾ ಪ್ರಾಧಿಕಾರ (ಆಯುರ್ವೇದ ವಿಭಾಗ, ಮೈಸೂರು). | ಆಯುರ್ವೇದ – ವಿದ್ವತ್. | ------ | 1909ಕ್ಕೆ ಮೊದಲು 1952ರ ವರೆಗೆ |
| 8. | ಸರ್ಕಾರಿ ಆಯುರ್ವೇದ ಕಾಲೇಜು ಸಮಿತಿ ಅಥವಾ ಪ್ರಾಧಿಕಾರ, ಮೈಸೂರು. | ಆಯುರ್ವೇದ – ವಿದ್ವತ್ | ------ | 1990ರಿಂದ 1928ರ ವರೆಗೆ |
| 9. | ಕರ್ನಾಟಕ ಆಯುರ್ವೇದ ವಿದ್ಯಾಪೀಠ, ಬೆಳಗಾಂ. | ಭಿಷಗ್ವರ್. | ------ | ------ |
| 10. | ಪ್ರೇಮ ವಿದ್ಯಾಪೀಠ, ತುಂಗಭದ್ರ.. | ಆಯುರ್ವೇದ ಚೂಡಾಮಣಿ ಆಯುರ್ವೇದ ಶಿರೋಮಣಿ ಭಿಬಗಿಂದು ವಿದ್ಯಾಗುರು. | ------ | ------ |
| 11. | ಆರ್ಯ ವೈದ್ಯಶಾಲಾ, ಬಿಜಾಪುರ. | ಭಿಷಗ್ವರ್. | ------ | ------ |
| 12. | ಸರ್ಕಾರಿ ಆಯುರ್ವೇದ ಶಾಲೆ, ಮೈಸೂರು. | | ಎ.ಎಂ.ಎಸ್. | ------- |
| 13. | ಸರ್ಕಾರಿ ಆಯುರ್ವೇದ ಶಾಲೆ ಮತ್ತು ಕಾಲೇಜು, ಮೈಸೂರು. | ಲೈಸೆನ್ಸಿಯೇಟ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಎಲ್.ಎ.ಎಂ.ಎಸ್. | --------- |
| 14. | ಭಾರತೀಯ ವೈದ್ಯ ಪದ್ಧತಿಗಳ ಅಧ್ಯಯನ ಮಂಡಲಿ,ಮೈಸೂರು ರಾಜ್ಯ. | ಡಿಪ್ಲೊಮಾ ಇನ್ ಆಯುರ್ವೇದಿಕ್ ಮೆಡಿಸಿನ್. | ಡಿ.ಎ.ಎಂ. | 1964 ರಿಂದ ಮುಂದಕ್ಕೆ |
| 15. | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. | ಬ್ಯಾಚುಲರ್ ಆಫ್ ದಿ ಸಿಸ್ಟಮ್ ಆಫ್ ಆಯುರ್ವೇದಿಕ್ ಮೆಡಿಸಿನ್.<br>ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ).<br>ಡಾಕ್ಟರ್ ಆಫ್ ಆಯುರ್ವೇದಿಕ್ ಮೆಡಿಸಿನ್. | ಬಿ.ಎಸ್.ಎ.ಎಂ.<br>ಬಿ.ಎ.ಎಂ.ಎಸ್<br>ಡಿ.ಎವೈ.ಎಂ. | 19--- ರಿಂದ 1982 ರ ವರೆಗೆ.<br>1982 ರಿಂದ ಮುಂದಕ್ಕೆ<br>1975ರಿಂದ ಮುಂದಕ್ಕೆ |
| 16. | ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು. | ಬ್ಯಾಚುಲರ್ ಆಫ್ ದಿ ಸಿಸ್ಟಮ್ ಆಫ್ ಆಯುರ್ವೇದಿಕ್ ಮೆಡಿಸಿನ್<br>ಡಾಕ್ಟರ್ ಇನ್ ಆಯುರ್ವೇದಿಕ್ ಮೆಡಿಸಿನ್<br>[1][ಆಯುರ್ವೇದಾಚಾರ್ಯ, (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎಸ್.ಎ.ಎಂ.<br>ಎಂ.ಡಿ.(ಎವೈ)<br>ಬಿ.ಎ.ಎಂ.ಎಸ್. | 1967 ರಿಂದ ಮುಂದಕ್ಕೆ<br>1977 ರಿಂದ ಮುಂದಕ್ಕೆ<br>1987ರ ವರೆಗೆ ಮತ್ತು 1987 ರಿಂದ ಮುಂದಕ್ಕೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 136 ಪಿಟಿಡಿ 90 ದಿನಾಂಕ 16.3.1991 ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| 17. | [1][ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು. | ಆಯುರ್ವೇದಾಚಾರ್ಯ, (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎ.ಎಂ.ಎಸ್. | 1985 ರ ವರೆಗೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 136 ಪಿಟಿಡಿ 90 ದಿನಾಂಕ 16.3.1991 ರ ಮೂಲಕ ಪ್ರತಿಯೋಜಿಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| 18. | ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ. | ಬ್ಯಾಚುಲರ್ ಆಫ್ ದಿ ಸಿಸ್ಟಮ್ ಆಫ್ ಆಯುರ್ವೇದಿಕ್ ಮೆಡಿಸಿನ್ .[1][ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎಸ್.ಎ.ಎಂ.<br>ಬಿ.ಎ.ಎಂ.ಎಸ್. | 1969ರಿಂದ ಮುಂದಕ್ಕೆ]<br>1984 ರಿಂದ ಮುಂದಕ್ಕೆ] |
| 1[19 | ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ. | ಬ್ಯಾಚುಲರ್ ಆಫ್ ದಿ ಸಿಸ್ಟಮ್ ಆಫ್ ಆಯುರ್ವೇದಿಕ್ ಮೆಡಿಸಿನ್. ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಆಂಡ್ ಸರ್ಜರಿ). | ಬಿ.ಎಸ್.ಎ.ಎಂ.<br>ಬಿ.ಎ.ಎಂ.ಎಸ್. | 1973 ರಿಂದ 1983ರ ವರೆಗೆ<br>1983 ರಿಂದ ಮುಂದಕ್ಕೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 136 ಪಿಟಿಡಿ 90 ದಿನಾಂಕ 16.3.1991 ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

**ಕೇರಳ**

| | | | | |
|---|---|---|---|---|
| 1. | ಕೇರಳ ವಿಶ್ವವಿದ್ಯಾನಿಲಯ, ಕೇರಳ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್.<br>ಡಿಪ್ಲೊಮೋ ಇನ್ ಆಯುರ್ವೇದಿಕ್ ಮೆಡಿಸಿನ್.<br>ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ.<br>ಡಾಕ್ಟರ್ ಆಫ್ ಮೆಡಿಸಿನ್ (ಆಯುರ್ವೇದಿಕ್). | ಬಿ.ಎ.ಎಂ.<br>ಡಿ.ಎ.ಎಂ.<br>ಬಿ.ಎ.ಎಂ.ಎಸ್.<br>ಎಂ.ಡಿ.(ಆಯುರ್ವೇದ) | 1958 ರಿಂದ 1979ರ ವರೆಗೆ<br>1962ರ ವರೆಗೆ.<br>1979 ರಿಂದ ಮುಂದಕ್ಕೆ<br>1976ರಿಂದ ಮುಂದಕ್ಕೆ |
| 2. | ತಿರುವಾಂಕೂರ್ ಸರ್ಕಾರ, ಕೊಚ್ಚಿನ್. | ವೈದ್ಯಕಲಾನಿಧಿ | ---------- | ---------- |
| 3. | ಸರ್ಕಾರಿ ಆಯುರ್ವೇದ ಕಾಲೇಜ್, ತ್ರಿಪುಣಥುರ, ಕೇರಳ. | ಶಾಸ್ತ್ರ – ಭೂಷಣ – ಆಯುರ್ವೇದ. | ---------- | ---------- |
| 4. | ಕೊಚ್ಚಿನ್ ಸರ್ಕಾರ. | ವೈದ್ಯ ಭೂಷಣಂ. | ---------- | ---------- |
| 5. | ತಿರುವಾಂಕೂರ್ ಕೊಚ್ಚಿನ್ ಸರ್ಕಾರ. | ಆಯುರ್ವೇದ ಭೂಷಣಂ. | ---------- | ---------- |
| 6. | ತಿರುವಾಂಕೂರ್ ಸರ್ಕಾರ. | ನೇತ್ರ ವೈದ್ಯ. ವಿಶಾರದ. ವೈದ್ಯಕಲಾನಿಧಿ. | ---------- | ---------- |
| 7. | ಕೇರಳ ಸರ್ಕಾರ. | ಡಿಪ್ಲೊಮಾ ಇನ್ ಆಯುರ್ವೇದಿಕ್ ಮೆಡಿಸಿನ್. | ಡಿ.ಎ.ಎಂ. | ಮುಂದುವರೆಯುತ್ತಿದೆ. |

| | 1 | 2 | 3 | 4 |
|---|---|---|---|---|
| 8. | ತಿರುವಾಂಕೂರ್ ಸರ್ಕಾರ. | ವೈದ್ಯಶಾಸ್ತ್ರಿ ಮರ್ಮ.<br>ವೈದ್ಯ ವಿಶಾರದ. | ------ | ------ |
| 9. | ಕೇರಳೀಯ ಆಯುರ್ವೇದ ಮಹಾಪಾಠಶಾಲಾ, ಶೋರಾಪುರ್, ಕೇರಳ. | ವೈದ್ಯಪಾದನ್. | ------ | ------ |
| 10. | ಕೊಚ್ಚಿನ್ ಸರ್ಕಾರ. | ದಿ ಸರ್ಟಿಫಿಕೇಟ್ ವಿಷ ವೈದ್ಯ ಟ್ರೈನಿಂಗ್. | ------ | ------ |
| 11. | ಮಾಧವ ಮೆಮೋರಿಯಲ್ ಆಯುರ್ವೇದಿಕ್ ಕಾಲೇಜು, ಕಣ್ಣಾನೂರು, ಕೇರಳ. | ವೈದ್ಯ ವಿಭೂಷಣಂ. | ------ | 1963ರ ವರೆಗೆ. |
| 12. | ಮಾಧವ ಆಯುರ್ವೇದಿಕ್ ಕಾಲೇಜು, ಎರ್ನಾಕುಲಂ. | ಆಯುರ್ವೇದ ಶಾಸ್ತ್ರಿ.<br>ಆಯುರ್ವೇದ ವಿದ್ವಾನ್. | ಡಿ.ಎ.ಎಸ್. | 1953 ರಿಂದ 1957ರ ವರೆಗೆ<br>1957ರ ವರೆಗೆ. |
| 13. | ಆಯುರ್ವೇದಿಕ್ ಕಾಲೇಜು, ಕೊಟ್ಟಕಲ್, ಕೇರಳ. | ಆರ್ಯ ವೈದ್ಯನ್. | ---------- | ---------- |
| 14. | ಆರ್ಯವೈದ್ಯ ಪಾಠಶಾಲಾ, ಕೊಟ್ಟಕಲ್. | ಆರ್ಯ ವೈದ್ಯ ಡಿಪ್ಲೊಮಾ. | ---------- | ---------- |
| 15. | ಗೌರ್ನಮೆಂಟ್ ಆಯುರ್ವೇದಿಕ್ ಕಾಲೇಜು, ತ್ರಿಪುನಿಥುರ. | ಆಯುರ್ವೇದ – ಶಾಸ್ತ – ಭೂಷಣ. | ---------- | ---------- |
| 16. | ಬೋರ್ಡ್ ಆಫ್ ಪಬ್ಲಿಕ್ ಎಕ್ಸಾಮಿನೇಷನ್ಸ್, ಕೊಚ್ಚಿನ್. | ಆಯುರ್ವೇದ – ಭೂಷಣಂ. | ---------- | ---------- |
| 17. | ತಿರುವಾಂಕೂರು ಗೌರ್ನಮೆಂಟ್. | ಡಿಪ್ಲೊಮಾ ಇನ್ ಇಂಡಿಜೀನಸ್ ಮೆಡಿಸಿನ್<br>ವಿಷ ವೈದ್ಯ ವಿಶಾರದ. | ಡಿ.ಐ.ಎಂ. | ---------- |
| 18. | ಯೂನಿವರ್ಸಿಟಿ ಆಫ್ ಕ್ಯಾಲಿಕಟ್, ಕ್ಯಾಲಿಕಟ್. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್. | ಬಿ.ಎ.ಎಂ. | 1977 ರಿಂದ ಮುಂದಕ್ಕೆ |
| 19. | ಯೂನಿವರ್ಸಿಟಿ ಆಫ್ ಸೌಗಾರ್, ಸೌಗಾರ್. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1964 ರಿಂದ ಮುಂದಕ್ಕೆ |

**ಮಧ್ಯಪ್ರದೇಶ**

| | | | | |
|---|---|---|---|---|
| 1. | ಜಿವಾಜಿ ವಿಶ್ವವಿದ್ಯಾಲಯ, ಗ್ವಾಲಿಯರ್. | ಬ್ಯಾಚುಲರ್ ಆಫ್ ಆಯುರ್ವೇದ್ ವಿತ್ ಮಾಡರ್ನ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1965 ರಿಂದ ಮುಂದಕ್ಕೆ |

| | 1 | 2 | 3 | 4 |
|---|---|---|---|---|
| 2. | ಇಂದೋರ್ ವಿಶ್ವವಿದ್ಯಾನಿಲಯ, ಇಂದೋರ್. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1965 ರಿಂದ ಮುಂದಕ್ಕೆ |
| 3. | ವಿಕ್ರಂ ವಿಶ್ವವಿದ್ಯಾನಿಲಯ, ಉಜ್ಜಯಿನಿ. | ಬ್ಯಾಚುಲರ್ ಆಫ್ ಆಯುರ್ವೇದ್ ವಿತ್ ಮಾಡರ್ನ್ ಮೆಡಿಸಿನ್ ಆಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1964 ರಿಂದ ಮುಂದಕ್ಕೆ |
| 4. | ರವಿಶಂಕರ್ ವಿಶ್ವವಿದ್ಯಾಲಯ, ರಾಯಪುರ್. | ಬ್ಯಾಚುಲರ್ ಆಫ್ ಆಯುರ್ವೇದ್ ವಿತ್ ಮಾಡರ್ನ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1965 ರಿಂದ ಮುಂದಕ್ಕೆ |
| 5. | ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್, ಮಧ್ಯಪ್ರದೇಶ (ಮಧ್ಯಭಾರತ ವಲಯ) ಗ್ವಾಲಿಯರ್. | ಭಿಷಗಾಚಾರ್ಯ. | ಎಲ್.ಐ.ಎಂ. | 1957 ರಿಂದ ಮುಂದಕ್ಕೆ |
| 6. | ಮಹಾಕೇಶಲ್ ಆಯುರ್ವೇದಿಕ್ ಬೋರ್ಡ್, ಜಬ್ಬಲ್ಪುರ್. | ಭಿಷಗ್ವರ. | ಎಲ್.ಎ.ಪಿ. | -------- |
| 7. | ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್, ಮಧ್ಯಪ್ರದೇಶ (ಮಧ್ಯಭಾರತ ವಲಯ) ಗ್ವಾಲಿಯರ್. | ಆರ್ಯುರ್ವೇದ ವಿಜ್ಞಾನಾಚಾರ್ಯ. | ಎ.ವಿ.ಎಂ.ಎಸ್. | 1958 ರಿಂದ ಮುಂದಕ್ಕೆ |
| 8. | ಗೌರ್ನಮೆಂಟ್ ಆಯುರ್ವೇದಿಕ್ ವಿದ್ಯಾಲಯ, ಗ್ವಾಲಿಯರ್ (ಆಯುರ್ವೇದಿಕ್ ಎಕ್ಸಾಮಿನೇಷನ್ ಗ್ವಾಲಿಯರ್ ಸ್ಟೇಟ್). | (i) ವೈದ್ಯಶಾಸ್ತ್ರಿ.<br>(ii) ವೈದ್ಯ – ವರ.<br>(iii) ಹಿಂದಿ ವೈದ್ಯ ಪರೀಕ್ಷೆ.<br>(iv) ಆಯುರ್ವೇದ ಶಾಸ್ತ್ರಿ. | ------- | 1916 ರಿಂದ ಮುಂದಕ್ಕೆ 1954ರ ವರೆಗೆ ಪ್ರಸ್ತುತ ನಿಂತು ಹೋಗಿದೆ. ಪ್ರಸ್ತುತ ನಿಂತು ಹೋಗಿದೆ. |
| 9. | ಅಷ್ಟಾಂಗ ಆಯುರ್ವೇದ ವಿದ್ಯಾಲಯ, ಉಜ್ಜಯಿನಿ. | ವೈದ್ಯ – ವಾಚಸ್ಪತಿ. | ಎಲ್.ಎ.ಎಂ. | 1.5.56 ರ ವರೆಗೆ. |
| 10. | ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್, ಗ್ವಾಲಿಯರ್. | ಸಸ್ಯಕ್ – ವೈದ್ಯ. | -------- | 1954ರ ತರುವಾಯ ನಿಂತು ಹೋಗಿದೆ. |

| | 1 | 2 | 3 | 4 |
|---|---|---|---|---|
| 1[10ಎ | ಮಧ್ಯಪ್ರದೇಶ ಬೋರ್ಡ್ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ ಆಫ್ ಮೆಡಿಸಿನ್ ಅಂಡ್ ನ್ಯಾಚುರೋಪತಿ, ಭೂಪಾಲ್. | ಲೈಸೆನ್ಸಿಯೇಟ್ ಆಯುರ್ವೇದಿಕ್ ಪ್ರಾಕ್ಟೀಷನರ್ (ಭಿಷಗ್ವರ್). ಆಯುರ್ವೇದ ವಿಜ್ಞಾನಾಚಾರ್ಯ (ಆಯುರ್ವೇದ ವಿಜ್ಞಾನಾಚಾರ್ಯ ವಿತ್ ಮಾಡರ್ನ್ ಮೆಡಿಸಿನ್ ಅಂಡ್ ಸರ್ಜರಿ). ಭಿಷಗಾಚಾರ್ಯ. | ಎಲ್.ಎ.ಪಿ. ಎ.ವಿ.ಎಂ.ಎಸ್. ಎಲ್.ಐ.ಎಂ. | 1971 ರಿಂದ 1973ರ ವರೆಗೆ ಮತ್ತು 1978 ರಿಂದ 1984ರ ವರೆಗೆ. 1971 ರಿಂದ 1974ರ ವರೆಗೆ ]1 |

1. ಅಧಿಸೂಚನೆ ಸಂಖ್ಯೆ ಎಚ್ ಇ ಡಬ್ಲ್ಯು 82, ಪಿಟಿಡಿ 88 ದಿನಾಂಕ21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| 11. | ಯೂನಿರ್ವಸಿಟಿ ಆಫ್ ಸೌಗರ್ ಸೌಗರ್. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1964 ರಿಂದ ಮುಂದಕ್ಕೆ |
| 12 | ಅವದೇಷ್ ಪ್ರತಾಪ್ ಸಿಂಗ್ ವಿಶ್ವವಿದ್ಯಾಲಯ, ರೇವ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1975 ರಿಂದ ಮುಂದಕ್ಕೆ |
| 13. | ಯೂನಿವರ್ಸಿಟಿ ಆಫ್ ಜಬ್ಬಲ್ ಪುರ್, ಜಬ್ಬಲ್ ಪುರ್. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1971 ರಿಂದ ಮುಂದಕ್ಕೆ |

**ಮಹಾರಾಷ್ಟ್ರ**

| | | | | |
|---|---|---|---|---|
| 1. | ನಾಗಪುರ ಯೂನಿವರ್ಸಿಟಿ ನಾಗಪುರ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಆಂಡ್ ಸರ್ಜರಿ. ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎ.ಎಂ.ಎಸ್. (ನಾಗಪುರ) ಬಿ.ಎ.ಎಂ.ಎಸ್. | 1964 ರಿಂದ ಮುಂದಕ್ಕೆ 1980 ರಿಂದ ಮುಂದಕ್ಕೆ |
| 2. | ಪೂನಾ ಯೂನಿವರ್ಸಿಟಿ ಪುನಾ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಆಂಡ್ ಸರ್ಜರಿ. ಬ್ಯಾಚುಲರ್ ಆಫ್ ಸರ್ಜರಿ ಆ್ಯಂಡ್ ಆಯುರ್ವೇದಿಕ್ ಮೆಡಿಸಿನ್. ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎ.ಎಂ.ಎಸ್. ಬಿ.ಎಸ್.ಎ.ಎಂ. ಬಿ.ಎ.ಎಂ.ಎಸ್. | 1978 ರಿಂದ ಮುಂದಕ್ಕೆ 1976 ರಿಂದ 1979ರ ವರೆಗೆ 1978 ರಿಂದ ಮುಂದಕ್ಕೆ |
| 3. | ವಿದರ್ಭ ಬೋರ್ಡ್ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಮಹಾರಾಷ್ಟ್ರ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಆಂಡ್ ಸರ್ಜರಿ. | ಬಿ.ಎ.ಎಂ.ಎಸ್. (ವಿದರ್ಭ) | ------ |

| | 1 | 2 | 3 | 4 |
|---|---|---|---|---|
| 4. | ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಮಹಾರಾಷ್ಟ್ರ. | ಆಯುರ್ವೇದ ವಿಶಾರದ | ಎ.ವಿ.ವಿ. (ನಾಂದೇಡ್) | ------ |
| 5. | ಕಮಿಟಿ ಆಫ್ ಶುದ್ಧ ಆಯುರ್ವೇದಿಕ್ ಕೋರ್ಸ್, ಮಹಾರಾಷ. | ಆಯುರ್ವೇದ ಪ್ರವೀಣ | ಡಿ.ಎಸ್.ಎ.ಸಿ. (ಬಾಂಬೆ) | --------- |
| 6. | ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಮುಂಬೈ. | ಗ್ರಾಜುಯೇಟ್ ಆಫ್ ದಿ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಮೆಡಿಸಿನ್.<br>ಮೆಂಬರ್ ಆಫ್ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಮೆಡಿಸಿನ್.<br>ಆಯುರ್ವೇದ ವಿಶಾರದ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಆಂಡ್ ಸರ್ಜರಿ).<br>[1][ಫೆಲೊ ಆಫ್ ದಿ ಫ್ಯಾಕಲ್ಟಿ ಎಫ್.ಎಫ್.ಎ.ಎಂ. ಆಫ್ ಆಯುರ್ವೇದಿಕ್ ಮೆಡಿಸಿನ್. | ಜಿ.ಎಫ್.ಎ.ಎಂ. (ಬಾಂಬೆ)<br>ಎಂ.ಎಫ್.ಎ.ಎಂ. (ಮಹಾರಾಷ್ಟ್ರ)<br>ಡಿ.ಎ.ಎಸ್.ಎಫ್.<br>ಬಿ.ಎ.ಎಂ.ಎಸ್. (ಮಹಾರಾಷ್ಟ್ರ ಫ್ಯಾಕಲ್ಟಿ) | --------<br>--------<br>1975 ರಿಂದ ಮುಂದಕ್ಕೆ<br>1971 ರಿಂದ 1983ರ ವರೆಗೆ][1] |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯು 82, ಪಿಟಿಡಿ 88 ದಿನಾಂಕ21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| 7. | ತಿಲಕ್ ಮಹಾರಾಷ್ಟ್ರ ವಿದ್ಯಾಪೀಠ, ಪೂನಾ. | ಆಯುರ್ವೇದ ವಿಶಾರದ್.<br>ಆಯುರ್ವೇದ ಪಾರಂಗತ. | ಎ.ವಿ.ವಿ. (ಪೂನಾ)<br>ಎ.ವಿ.ವಿ. (ಪೂನಾ) | [1][1942 ರಿಂದ 1980ರ ವರೆಗೆ]1<br>1[1942 ರಿಂದ 1980ರ ವರೆಗೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯು 82, ಪಿಟಿಡಿ 88 ದಿನಾಂಕ21/23.12.1988ರ ಮೂಲಕ ಪ್ರತಿಯೋಜಿಸಲಾಗಿದೆ.ಪುಟ 49 ರಲ್ಲಿದೆ.

| | | | | |
|---|---|---|---|---|
| 8. | ಗುರುಕುಲ ಯೂನಿವರ್ಸಿಟಿ, ಪೂನಾ. | ಆಯುರ್ವೇದಾಲಂಕಾರ | | ------ |
| 9. | ಆರ್ಯಂಗಲ್ ಮಹಾವಿದ್ಯಾಲಯ, ಸತಾರ. | ಆಯುರ್ವೇದ ವಿಶಾರದ. | ಎ,.ವಿ.ವಿ.(ಸತಾರಾ) | 1942ಕ್ಕೂ ಮುಂಚೆ |
| 10. | ಆಯುರ್ವೇದ ಮಹಾವಿದ್ಯಾಲಯ, ಅಹಮದ್ ನಗರ. | ಆಯುರ್ವೇದ್ – ತೀರ್ಥ. | ಎ.ಟಿ. (ಅಹಮದ್ ನಗರ) | 1942ಕ್ಕೂ ಮುಂಚೆ. |
| 11. | ಶಿವಾಜಿ ವಿಶ್ವವಿದ್ಯಾಲಯ, ಕೊಲ್ಲಾಪುರ. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್. ಅಂಡ್ ಸರ್ಜರಿ.<br>ಬ್ಯಾಚುಲರ್ ಆಫ್ ಶುದ್ಧ ಆಯುರ್ವೇದಿಕ್ ಮೆಡಿಸಿನ್.<br>ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎ.ಎಂ.ಎಸ್.<br>ಬಿ.ಎಸ್.ಎ.ಎಂ.<br>ಬಿ.ಎ.ಎಂ.ಎಸ್. | 1975 ರಿಂದ 1982 ರ ವರೆಗೆ<br>1977 ರಿಂದ 1982 ರ ವರೆಗೆ.<br>1978ರಿಂದ ಮುಂದಕ್ಕೆ |

| | 1 | 2 | 3 | 4 |
|---|---|---|---|---|
| 12. | ಮರಾಠಾವಾಡ ವಿಶ್ವವಿದ್ಯಾನಿಲಯ, ಔರಂಗಾಬಾದ್. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. ಆಯುರ್ವೇದಾಚಾರ್ಯ, (ಬ್ಯಾಚುಲರ್ ಆಫ್ ಶುದ್ಧ ಆಯುರ್ವೇದಿಕ್ ಮೆಡಿಸಿನ್). ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎ.ಎಂ. ಅಂಡ್ ಎಸ್. ಬಿ.ಎಸ್.ಎ.ಎಂ ಬಿ.ಎ.ಎಂ.ಎಸ್.. | 1971 ರಿಂದ 1977ರ ವರೆಗೆ. 1970ರಿಂದ 1979ರ ವರೆಗೆ. 1980ರಿಂದ ಮುಂದಕ್ಕೆ |
| 13. | ಬಾಂಬೆ ಯುನಿವರ್ಸಿಟಿ. | ಆಯುರ್ವೇದಾಚಾರ್ಯ ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎಸ್.ಎ.ಎಂ. ಬಿ.ಎ.ಎಂ.ಎಸ್. | 1976 ರಿಂದ 1983 ರ ವರೆಗೆ. 1980ರಿಂದ ಮುಂದಕ್ಕೆ |

[1][ಕರ್ನಾಟಕ **XXXX**][1]

1. ಅಧಿಸೂಚನೆ ಸಂಖ್ಯೆ ಎಚ್ ಇ ಡಬ್ಲ್ಯು 82, ಪಿಟಿಡಿ 88 ದಿನಾಂಕ21/23.12.1988ರ ಮೂಲಕ ಬಿಟ್ಟುಬಿಟಡಲಾಗಿದೆ. ಪುಟ 49 ರಲ್ಲಿದೆ.

**ಒರಿಸ್ಸಾ**

| | | | | |
|---|---|---|---|---|
| 1. | ಆಯುರ್ವೇದಿಕ್ ಎಕ್ಸಾಮಿನೇಷನ್ ಬೋರ್ಡ್, ಒರಿಸ್ಸಾ. | ಡಿಪ್ಲೊಮಾ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಡಿ.ಎ.ಎಂ.ಎಸ್. | 1953 ರಿಂದ 1962 ರ ವರೆಗೆ. |
| 2. | ಒರಿಸ್ಸಾ ಅಸೋಸಿಯೇಷನ್ ಆಫ್ ಸಾಂಸ್ಕೃತ ಲರ್ನಿಂಗ್ ಅಂಡ್ ಕಲ್ಚರ್, ಪುರಿ. | ಆಯುರ್ವೇದ ಶಾಸ್ತ್ರಿ. ಆಯುರ್ವೇದಾಚಾರ್ಯ. | ----- ----- | 1933 ರಿಂದ ಮುಂದಕ್ಕೆ 1933 ರಿಂದ ಮುಂದಕ್ಕೆ |
| 3. | ಸ್ಟೇಟ್ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಮೆಡಿಸಿನ್, ಒರಿಸ್ಸಾ. | ಆಯುರ್ವೇದಾಚಾರ್ಯ. | ಬಿ.ಎಸ್.ಎ.ಎಂ. | 1969 ರಿಂದ ಮುಂದಕ್ಕೆ |
| 4. | ಉತ್ಕಲ್ ಯೂನಿವರ್ಸಿಟಿ ಭುವನೇಶ್ವರ್. | ಬ್ಯಾಚುಲರ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್. | 1974 ರಿಂದ ಮುಂದಕ್ಕೆ |
| 5. | ಸಂಬಲ್‌ಪುರ್ ಯೂನಿವರ್ಸಿಟಿ ಬುರ್ಲಾ, ಸಂಬಲ್‌ಪುರ. | ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ.) | ಬಿ.ಎ.ಎಂ.ಎಸ್. | 1980 ರಿಂದ ಮುಂದಕ್ಕೆ |

ಪಂಜಾಬ್

| | | | | |
|---|---|---|---|---|
| 1[1. | ಪಂಜಾಬ್ ಸ್ಟೇಟ್ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ ಆಫ್ ಮೆಡಿಸನ್, ಚಂಡೀಗಢ. | ಆಯುರ್ವೇದಾಚಾರ್ಯ (ಗ್ರಾಜುಯೇಟ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಜಿ.ಎ.ಎಂ.ಎಸ್.<br>ಡಿ.ಎ.ಎಂ.ಎಸ್. | 1960 ರಿಂದ 1982 ರ ವರೆಗೆ.<br>1986 – 87ರ ವರೆಗಿನ ತಂಡಗಳು. |
| 2. | ಸನಾತನ ಧರ್ಮ ಪ್ರೇಮಗಿರಿ ಆಯುರ್ವೇದಿಕ್ ಕಾಲೇಜ್ (ಲಾಹೋರ್) ಭಿವಾನಿ/ಜಿಂದ್/ಕುರುಕ್ಷೇತ್ರ | ಆಯುರ್ವೇದಾಚಾರ್ಯ ಕವಿರಾಜ್ | ಎಂ.ಎ.ಎಂ.ಎಸ್.<br>ಎಲ್.ಎ.ಎಂ.ಎಸ್. | 1957ರ ವರೆಗೆ<br>1950ರಿಂದ 1956ರ ವರೆಗೆ]1. |

1. ಅಧಿಸೂಚನೆ ಸಂಖ್ಯೆ ಎಚ್ ಇ ಡಬ್ಲ್ಯು 82, ಪಿಟಿಡಿ 88 ದಿನಾಂಕ21/23.12.1988ರ ಮೂಲಕ ಪ್ರತಿಯೋಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| 3. | ಡಿ.ಎ.ವಿ. ಮೇನೇಜಿಂಗ್ ಕಮಿಟಿ, ಅಮೃತಸರ್/ಜಲಂಧರ್ | ವೈದ್ಯ–ವಾಚಸ್ಪತಿ | ವಿವಿ. | ---- |
| 4. | ವೇದಿಕ್ ಅಂಡ್ ಯುನಾನಿ ತಿಬ್ಬಿಯ ಕಾಲೇಜ್, ಅಮೃತಸರ್ | ವೈದ್ ಕವಿರಾಜ್<br>ವೈದ್ ರತನ್ | ವಿ.ಕೆ.<br>ವಿ.ಆರ್. | 1947ರ ವರೆಗೆ.<br>1947ರ ವರೆಗೆ. |
| 5. | ಆಯುರ್ವೇದಿಕ್ ಮತ್ತು ಯುನಾನಿ ತಿಬ್ಬಿ ಕಾಲೇಜ್, ಅಮೃತಸರ್ | ವಾಚಸ್ಪತಿ<br>1 [ವೈದ್ಯ ಶಾಸ್ತ್ರಿ | ವಿ.<br>---- | 1947ರ ವರೆಗೆ.<br>1947 ರ ವರೆಗೆ.]1 |

1. ಅಧಿಸೂಚನೆ ಸಂಖ್ಯೆ ಎಚ್ ಇ ಡಬ್ಲ್ಯು 82, ಪಿಟಿಡಿ 88 ದಿನಾಂಕ21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| 6. | ಗವರ್ನ್‌ಮೆಂಟ್ ಆಯುರ್ವೇದಿಕ್ ವಿದ್ಯಾಲಯ (ಕಾಲೇಜ್) ಪಾಟಿಯಾಲ. | ವೈದ್ಯ<br>ವೈದ್ಯವಿಶಾರದ<br>ವೈದ್ಯಶಾಸ್ತ್ರಿ<br>ಆಯುರ್ವೇದಾಚಾರ್ಯ | ವಿ.<br>ವಿ.ವಿ.<br>ವಿ.ವಿ.<br>ಎ.ಎ. | 1956ರಿಂದ 1961ರ ವರೆಗೆ<br>1956ರಿಂದ 1961ರ ವರೆಗೆ<br>1956ರಿಂದ 1961ರ ವರೆಗೆ<br>1912ರಿಂದ 1961 ರ ವರೆಗೆ. |
| 7. | ಗುರುನಾನಕ್ ದೇವ್ ಯುನಿವರ್ಸಿಟಿ, ಅಮೃತಸರ್. | ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ) | ಬಿ.ಎ.ಎಂ.ಎಸ್. | 1982 ರಿಂದ ಮುಂದಕ್ಕೆ |
| 8. | ಪಂಜಾಬ್ ಯುನಿವರ್ಸಿಟಿ, ಪಾಟಿಯಾಲ. | ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ)<br>ಆಯುರ್ವೇದ ವಾಚಸ್ಪತಿ. | ಬಿ.ಎ.ಎಂ.ಎಸ್.<br>ಎಂ.ಡಿ.(ಎವೈ) | 1976ರಿಂದ ಮುಂದಕ್ಕೆ<br>1973 ರಿಂದ ಮುಂದಕ್ಕೆ |

**ರಾಜಾಸ್ಥಾನ**

| | 1 | 2 | 3 | 4 |
|---|---|---|---|---|
| . | ರಾಜಸ್ಥಾನ ಆಯುರ್ವೇದ ವಿಭಾಗೀಯ ಪರೀಕ್ಷಾ ಮಂಡಲ, ಅಜ್‌ಮೀರ್. | ಭಿಷಗ್ವರ್.<br>ಭಿಷಗಾಚಾರ್ಯ. | ------<br>------ | 1962 ರಿಂದ ಮುಂದಕ್ಕೆ<br>1962 ರಿಂದ ಮುಂದಕ್ಕೆ |
| 2. | ರಾಜ್ ಪುತಾನ ಆಯುರ್ವೇದಿಕ್ ಅಂಡ್ ಯುನಾನಿ ತಿಬ್ಬಿ ಕಾಲೇಜ್, ಜೈಪುರ | ಭಿಷಗಾಚಾರ್ಯ ಶಿರೋಮಣಿ<br>ಭಿಷಗರತ್ನ ಶಾಸ್ತ್ರಿ | -------<br>--------- | 1951 ರಿಂದ ಮುಂದಕ್ಕೆ<br>1951 ರಿಂದ ಮುಂದಕ್ಕೆ |
| 3. | ಗವರ್ನಮೆಂಟ್ ಆಯುರ್ವೇದಿಕ್ ಕಾಲೇಜ್, ಜೈಪುರ್ | ಭಿಷಕ್.<br>ಭಿಷಗಾಚಾರ್ಯ.<br>ಭಿಷ್ ಕಲಾ. | ---------<br>------<br>--------- | ---------<br>---------<br>--------- |
| 4. | ರಾಜಸ್ಥಾನ್‌ಯುನಿವರ್ಸಿಟಿ, ಜೈಪುರ್ | [1][ಆಯುರ್ವೇದಾಚಾರ್ಯ.<br>ಆಯುರ್ವೇದ ಬೃಹಸ್ಪತಿ.<br>ಆಯುರ್ವೇದಾಚಾರ್ಯ. | ---------<br>---------<br>--------- | 1972 ರಿಂದ 1980ರ ವರೆಗೆ.<br>1972ರಿಂದ 1982 ರ ವರೆಗೆ<br>1981 ರಿಂದ 1984 ರ ವರೆಗೆ]1. |
| 5. | ಮಹಾರಾಜಾ ಕಾಲೇಜ್ ಆಫ್ ಆಯುರ್ವೇದ, ಜೈಪುರ್ | ಶಾಸ್ತ್ರ – ಆಚಾರ್ಯ. | --------- | --------- |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 82, ಪಿ.ಡಿ.ಪಿ. 88, ದಿನಾಂಕ 21/23.12.1988ರ ಮೂಲಕ ಪ್ರತಿಯೋಜಿಸಲಾಗಿದೆ. ಪುಟ 49 ರಲ್ಲಿದೆ.

**ತಮಿಳುನಾಡು**

| | | | | |
|---|---|---|---|---|
| 1. | ಗವರ್ನ್‌ಮೆಂಟ್ ಕಾಲೇಜ್ ಆಫ್ ಇಂಡಿಯನ್ / ಇಂಡಿಜೀನಿಯಸ್/ ಇಂಟಿಗ್ರೇಟೆಡ್ ಮೆಡಿಸಿನ್, ಮದರಾಸು. | ಗ್ರಾಜುಯೇಟ್ ಆಫ್ ದಿ ಕಾಲೇಜ್ ಆಫ್ ಇಂಡಿಯನ್ / ಇಂಡಿಜೀನಸ್/ ಇಂಟಿಗ್ರೇಟೆಡ್ ಮೆಡಿಸಿನ್.<br>ಲೈಸೆನ್ಸಿಯೇಟ್ ಇನ್ ಇಂಡಿಯನ್ /ಇಂಡಿಜೀನಸ್/ ಇಂಟಿಗ್ರೇಟೆಡ್ ಮೆಡಿಸಿನ್. | ಜಿ.ಸಿ.ಐ.ಎಂ.<br>ಎಲ್.ಐ.ಎಂ. | 1947 ರಿಂದ 1960ರ ವರೆಗೆ<br>1924 ರಿಂದ 1948 ರ ವರೆಗೆ. |
| 2. | ಮದ್ರಾಸ್ ಆಯುರ್ವೇದಿಕ್ ಕಾಲೇಜ್, ಮದ್ರಾಸ್. | ಆಯುರ್ವೇದ ಭೂಷಣ್<br>ಆಯುರ್ವೇದ ಭಿಷಗ್ವರ. | --------- | --------- |
| 3. | ವೆಂಕಟರಮಣ ಆಯುರ್ವೇದಿಕ್ ಕಾಲೇಜ್, ಮೈಲಾಪುರ್, ಮದ್ರಾಸ್. | ವೈದ್ಯ ವಿಶಾರದ. | --------- | --------- |
| 4. | ಯುನಿವರ್ಸಿಟಿ ಆಫ್ ಮದ್ರಾಸ್, ಮದ್ರಾಸ್. | ಆಯುರ್ವೇದ ಶಿರೋಮಣಿ. | --------- | 1930 ರಿಂದ 1977 ರವರೆಗೆ |

ಉತ್ತರ ಪ್ರದೇಶ

| | 1 | 2 | 3 | 4 |
|---|---|---|---|---|
| 1. | ಬನಾರಸ್ ಹಿಂದೂ ಯೂನಿವರ್ಸಿಟಿ, ವಾರಣಾಸಿ. | ಆಯುರ್ವೇದ ಶಾಸ್ತ್ರಾಚಾರ್ಯ.<br>ಆಯುರ್ವೇದಾಚಾರ್ಯ ಇನ್ ಮೆಡಿಸಿನ್ ಆ್ಯಂಡ್ ಸರ್ಜರಿ.<br>ಆಯುರ್ವೇದಾಚಾರ್ಯ ವಿತ್ ಮಾಡರ್ನ್ ಮೆಡಿಸಿನ್ ಅಂಡ್ ಸರ್ಜರಿ<br>ಡಾಕ್ಟರ್ ಆಫ್ ಆಯುರ್ವೇದಿಕ್ ಮೆಡಿಸಿನ್.<br>ಆಯುರ್ವೇದಾಚಾರ್ಯ ಬ್ಯಾಚುಲರ್ ಆಫ್ ಮೆಡಿಸಿನ್ ಅಂಡ್ ಸರ್ಜರಿ.<br>ಡಾಕ್ಟರ್ ಆಫ್ ಮೆಡಿಸಿನ್ (ಆಯುರ್ವೇದೀಯ). | ---------<br>ಎ.ಎಂ.ಎಸ್.<br>ಎ.ಎಂ.ಎಸ್.<br>ಡಿ.ಎವೈ.ಎಂ.<br>ಎ.ಬಿ.ಎಂ.ಎಸ್.<br>ಎಂ.ಡಿ.(ಆಯುರ್ವೇದ) | 1925 ರಿಂದ 1932ರ ವರೆಗೆ.<br>1934 ರಿಂದ 1953ರ ವರೆಗೆ.<br>1934 ರಿಂದ 1953ರ ವರೆಗೆ.<br>1963 ರಿಂದ 1977ರ ವರೆಗೆ<br>1954 ರಿಂದ 1967 ರ ವರೆಗೆ.<br>1977ರಿಂದ ಮುಂದಕ್ಕೆ |
| 2. | ಲಕ್ನೋ ಯೂನಿವರ್ಸಿಟಿ, ಲಕ್ನೋ. | ಬ್ಯಾಚುಲರ್ ಆಫ್ ಆಯುರ್ವೇದ್ ವಿತ್ ಮಾಡ್ರರ್ನ್ ಮೆಡಿಸಿನ್ ಅಂಡ್ ಸರ್ಜರಿ.<br>ಬ್ಯಾಚುಲರ್ ಆಫ್ ಮೆಡಿಸಿನ್ ಅಂಡ್ ಬ್ಯಾಚುಲರ್ ಆಫ್ ಸರ್ಜರಿ.<br>ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ).<br>ಡಾಕ್ಟರ್ ಆಫ್ ಮೆಡಿಸಿನ್ (ಆಯುರ್ವೇದ). | ಬಿ.ಎ.ಎಂ.ಎಂ.ಎಸ್.<br>ಬಿ.ಎಂ.ಬಿ.ಎಸ್.<br>ಬಿ.ಎ.ಎಂ.ಎಸ್.<br>ಎಂ.ಡಿ.(ಎವೈ) | 1960ರಿಂದ ಮುಂದಕ್ಕೆ<br>1955 ರಿಂದ 1964ರ ವರೆಗೆ.<br>1982 ರಿಂದ ಮುಂದಕ್ಕೆ<br>1974 ರಿಂದ ಮುಂದಕ್ಕೆ |
| 3. | ಆಯುರ್ವೇದ ಕಾಲೇಜ್, ಗುರುಕುಲ ವಿಶ್ವವಿದ್ಯಾನಿಲಯ, ಕಂಗರಿ (ಹರಿದ್ವಾರ). | ಆಯುರ್ವೇದ ಅಲಂಕಾರ.<br>ಆಯುರ್ವೇದ ವಾಚಸ್ಪತಿ. | ------<br>-------- | 1926 ರಿಂದ 1956ರ ವರೆಗೆ.<br>-------- |
| 4. | ಗುರುಕುಲ ವಿದ್ಯಾಲಯ, ವೃಂದಾವನ. | ಆಯುರ್ವೇದ ಶಿರೋಮಣಿ.<br>ಆಯುರ್ವೇದ ಭೂಷಣ. | ----------<br>---------- | 1916–1967ರ ವರೆಗೆ.<br>1944–1967ರ ವರೆಗೆ. |
| 5. | ಋಷಿಕುಲ ಆಯುರ್ವೇದಿಕ್ ಕಾಲೇಜ್, ಹರಿದ್ವಾರ್. | ಆಯುರ್ವೇದ ವಿಶಾರದ.<br>ವೈದ್ಯ ವಿಶಾರದ.<br>ವೈದ್ಯಶಾಸ್ತ್ರಿ.<br>ಆಯುರ್ವೇದ ಶಾಸ್ತ್ರಿ.<br>ಆಯುರ್ವೇದಾಚಾರ್ಯ. | ---------<br>---------<br>--------- | 1945ರ ವರೆಗೆ.<br>1945ರ ವರೆಗೆ<br>1945ರ ವರೆಗೆ<br>1944ರ ವರೆಗೆ |
| 6. | ಲಲಿತ ಹರಿ ಆಯುರ್ವೇದಿಕ್ ಕಾಲೇಜ್, ಪಿಲಿಭಿತ್. | ವೈದ್ಯ ಭೂಷಣ<br>ವೈದ್ಯ ರಾಜ್ | ---------- | 1944ರ ವರೆಗೆ.<br>1944ರ ವರೆಗೆ. |
| 7. | ಹಿಂದಿ ಸಾಹಿತ್ಯ ಸಮ್ಮೇಳನ, ಪ್ರಯಾಗ್. | ವೈದ್ಯ ವಿಶಾರದ<br>ಆಯುರ್ವೇದ ರತ್ನ | ----------<br>---------- | 1931 ರಿಂದ 1967ರ ವರೆಗೆ.<br>1931 ರಿಂದ 1967ರ ವರೆಗೆ. |

| | 1 | 2 | 3 | 4 |
|---|---|---|---|---|
| 8. | ಜವಾಲ್ ಪುರ್ ಮಹಾ ವಿದ್ಯಾಲಯ, ಹರಿದ್ವಾರ್ | ಆಯುರ್ವೇದ ಭಾಷರ್ (ಜವಲಾಪುರ ಕೇಂದ್ರ ಮಾತ್ರ) | ---------- | 1950 ರಿಂದ 1967ರ ವರೆಗೆ. |
| 9. | ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್, ಉತ್ತರ ಪ್ರದೇಶ, ಲಕ್ನೊ | ಡಿ ಪ್ಲೊಮಾ ಇನ್ ಇಂಡಿಜೀನಸ್ ಮೆಡಿಸಿನ್.<br>ಡಿಪ್ಲೊಮಾ ಇನ್ ಇಂಡಿಜೀನಸ್ ಮೆಡಿಸಿನ್ ಆಂಡ್ ಸರ್ಜರಿ.<br>ಬ್ಯಾಚುಲರ್ ಆಫ್ ಇಂಡಿಯನ್ ಮೆಡಿಸಿನ್ ಆಂಡ್ ಸರ್ಜರಿ.<br>ಆಯುರ್ವೇದಾಚಾರ್ಯ ಬ್ಯಾಚುಲರ್ ಆಫ್ ಮೆಡಿಸಿನ್ ಅಂಡ್ ಸರ್ಜರಿ.<br>ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದ್ ವಿತ್ ಮೆಡಿಸಿನ್ ಅಂಡ್ ಸರ್ಜರಿ). | ಡಿ.ಐ.ಎಂ.<br>ಡಿ.ಐ.ಎಂ.ಎಸ್.<br>ಬಿ.ಐ.ಎಂ.ಎಸ್.<br>ಎ.ಬಿ.ಎಂ.ಎಸ್.<br>ಆಯುರ್ವೇದಾಚಾರ್ಯ (ಬಿ.ಎ.ಎಂ.ಎಸ್.) | 1931 ರಿಂದ 1944 ರ ವರೆಗೆ.<br>1943 ರಿಂದ 1946ರ ವರೆಗೆ.<br>1947ರಿಂದ 1956ರ ವರೆಗೆ.<br>1957 ರಿಂದ 1966ರ ವರೆಗೆ.<br>1959 ರಿಂದ ಮುಂದಕ್ಕೆ |
| 10 | [1][ಕಾನ್‌ಪುರ ಯುನಿವರ್ಸಿಟಿ, ಕಾನ್‌ಪುರ. | ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದ ವಿತ್ ಮಾಡರ್ನ್ ಮೆಡಿಸಿನ್ ಅಂಡ್ ಸರ್ಜರಿ).<br>ಆಯುರ್ವೇದಾಚಾರ್ಯ ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸನ್ ಅಂಡ್ ಸರ್ಜರಿ. | ಬಿ.ಎ.ಎಂ.ಎಸ್.<br>ಬಿ.ಎ.ಎಂ.ಎಸ್. | 1972 ರಿಂದ 1982 ರ ವರೆಗೆ.<br>1983 ರಿಂದ ಮುಂದಕ್ಕೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯು 82, ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಪ್ರತಿಯೋಜಿಸಲಾಗಿದೆ ಪುಟ 49 ರಲ್ಲಿದೆ.

| | | | | |
|---|---|---|---|---|
| 11. | ಸಂಪೂರ್ಣಾನಂದ ಸಾಂಸ್ಕೃತ ಯುನಿವರ್ಸಿಟಿ, ವಾರಣಾಸಿ. | ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎ.ಎಂ.ಎಸ್. | 1970 ರಿಂದ ಮುಂದಕ್ಕೆ |

**ಪಶ್ಚಿಮ ಬಂಗಾಳ**

| | | | | |
|---|---|---|---|---|
| 1. | ಸಿಯಾಮದಾಸ್ ವೈದ್ಯಶಾಸ್ತ್ರ ಪಠ್‌ಪರಿಷತ್, ಕಲ್ಕತ್ತಾ. | ವೈದ್ಯ ಶಾಸ್ತ್ರಿ | --------- | 1926ರಿಂದ 1940ರ ವರೆಗೆ |
| 2. | ಜಮಿನಿಭೂಷಣ್ ಅಷ್ಟಾಂಗ ಆರ್ಯುರ್ವೇದ ವಿದ್ಯಾಲಯ, ಕಲ್ಕತ್ತಾ | ಭಿಷಗಾಚಾರ್ಯ (ಮಾಸ್ಟರ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಎಂ.ಎ.ಎಂ.ಎಸ್. | 1930 ರಿಂದ 1940ರ ವರೆಗೆ |
| 3. | ಜಮಿನಿಭೂಷಣ್ ಅಷ್ಟಾಂಗ ಆರ್ಯುರ್ವೇದ ವಿದ್ಯಾಲಯ, ಕಲ್ಕತ್ತಾ | ಬಿಷ್ವಗರ್ ರತ್ನ (ಲೈಸೆನ್ಸಿಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಎಲ್.ಎ.ಎಂ.ಎಸ್. | 1930 ರಿಂದ 1940ರ ವರೆಗೆ |

| | 1 | 2 | 3 | 4 |
|---|---|---|---|---|
| 4. | ಜನರಲ್ ಕೌನ್ಸಿಲ್<br>ಅಂಡ್ ಸ್ಟೇಟ್<br>ಫ್ಯಾಕಲ್ಟಿ ಆಫ್<br>ಆಯುರ್ವೇದಿಕ್<br>ಮೆಡಿಸಿನ್<br>ಪಶ್ಚಿಮಬಂಗಾಳ<br>(ಪ್ರಸ್ತುತ, ಪಶ್ಚಿಮ<br>ಬಂಗಾಳ<br>ಆಯುರ್ವೇದ<br>ಪರಿಷದ್) ಕಲ್ಕತ್ತಾ | ವೈದ್ಯ ಶಿರೋಮಣಿ<br>(ಮೆಂಬರ್ ಆಫ್ ದಿ<br>ಆಯುರ್ವೇದಿಕ್<br>ಸ್ಟೇಟ್ ಫ್ಯಾಕಲ್ಟಿ).<br>ವೈದ್ಯ ಶಾಸ್ತ್ರಿ.<br>ವೈದ್ಯಭೂಷಣ್<br>(ಲೈಸೆನ್ಸಿಯೇಟ್ ಆಯುರ್ವೇದಿಕ್<br>ಸ್ಟೇಟ್<br>ಫ್ಯಾಕಲ್ಟಿ).<br>ಆಯುರ್ವೇದತೀರ್ಥ<br>(ಮೆಂಬರ್ ಆಫ್ ದಿ<br>ಆಯುರ್ವೇದಿಕ್<br>ಸ್ಟೇಟ್ ಫ್ಯಾಕಲ್ಟಿ).<br>ಆಯುರ್ವೇದ ತೀರ್ಥ<br>(ಆಯುರ್ವೇದಿಕ್ ಸ್ಟೇಟ್ ಫ್ಯಾಕಲ್ಟಿ)<br>ಪ್ರಾಣಾಚಾರ್ಯ.<br>1[(ಡಿಪ್ಲೊಮಾ ಇನ್<br>ಆಯುರ್ವೇದಿಕ್<br>ಮೆಡಿಸಿನ್ ಅಂಡ್ ಸರ್ಜರಿ).<br>ಬ್ಯಾಚುಲರ್ ಆಫ್ ಆಯುರ್ವೇದಿಕ್<br>ಮೆಡಿಸಿನ್ ಅಂಡ್ ಸರ್ಜರಿ. | ಎಂ.ಎ.ಎಸ್.ಎಫ್.<br>------------<br>------------<br>ಎಲ್.ಎ.ಎಸ್.ಎಫ್.<br>ಎಂ.ಎ.ಎಸ್.ಎಫ್.<br>ಎ.ಎಸ್.ಎಫ್.<br>ಎಫ್.ಎ.ಎಸ್.ಎಫ್.<br>ಡಿ.ಎ.ಎಂ.ಎಸ್.<br>ಬಿ.ಎ.ಎಂ.ಎಸ್. | 1940 ರಿಂದ<br>1949ರ ವರೆಗೆ<br>1940 ರಿಂದ<br>1945ರವರೆಗೆ<br>1939ರಿಂದ 1950ರ<br>ವರೆಗೆ.<br>1947 ರಿಂದ<br>ಮುಂದಕ್ಕೆ<br>1946 ರಿಂದ<br>ಮುಂದಕ್ಕೆ<br>----<br>1979 ರಿಂದ 1983<br>ರ ವರೆಗೆ.<br>1979 ರಿಂದ 1984<br>ರ ವರೆಗೆ]1 |
| 5. | ಆಯುರ್ವಿದ್ಯಾ<br>ಪ್ರತಿಷ್ಠಾನ,<br>ಕಲ್ಕತ್ತಾ. | ಭಿಷಗ್‌ರತ್ನ.<br>ಭಿಷಗಾಚಾರ್ಯ. | ---------<br>---------- | 1930 ರಿಂದ 1940<br>ರ ವರೆಗೆ.<br>1930 ರಿಂದ 1940<br>ರ ವರೆಗೆ. |
| 6. | ಗಂಗಾಚರಣ್<br>ಆಯುರ್ವೇದ<br>ವಿದ್ಯಾಲಯ, ಕಲ್ಕತ್ತಾ. | ಆಯುರ್ವೇದ ಶಾಸ್ತ್ರಿ<br>ಆಯುರ್ವೇದಾಚಾರ್ಯ. | -----------<br>----------- | 1928 ರಿಂದ 1940<br>ರ ವರೆಗೆ.<br>1928 ರಿಂದ 1940<br>ರ ವರೆಗೆ. |
| 7. | ಮಹಾರಾಜ್<br>ಕಾಸಿಂಬಜಾರ್<br>ಗೋವಿಂದ ಸುಂದರಿ<br>ಆಯುರ್ವೇದಿಕ್<br>ಕಾಲೇಜ್, ಕಲ್ಕತ್ತಾ | ಆಯುರ್ವೇದ ಶಾಸ್ತ್ರಿ.<br>(ಬ್ಯಾಚುಲರ್ ಇನ್<br>ಆಯುರ್ವೇದಿಕ್ ಮೆಡಿಸಿನ್).<br>ಆಯುರ್ವೇದಾಚಾರ್ಯ<br>(ಮಾಸ್ಟರ್ ಆಫ್ ಆಯುರ್ವೇದಿಕ್<br>ಮೆಡಿಸಿನ್) ಡಾಕ್ಟರ್. | ಎ.ಎಂ.ಐ.<br>ಎ.ಎಂ.ಡಿ. | 1927 ರಿಂದ 1940<br>ರ ವರೆಗೆ.<br>1927 ರಿಂದ 1940<br>ರ ವರೆಗೆ. |
| 8. | ವಿಶ್ವನಾಥ್<br>ಆಯುರ್ವೇದ<br>ಮಹಾವಿದ್ಯಾಲಯ,<br>ಕಲ್ಕತ್ತಾ. | ಭಿಷಗರತ್ನ<br>(ಡಿಪ್ಲೊಮಾ ಇನ್ ಆಯುರ್ವೇದಿಕ್<br>ಮೆಡಿಸಿನ್ ಅಂಡ್ ಸರ್ಜರಿ)<br>ವೈದ್ಯ ಶಿರೋಮಣಿ<br>(ಬ್ಯಾಚುಲರ್ ಆಫ್<br>ಆಯುರ್ವೇದಿಕ್<br>ಮೆಡಿಸಿನ್ ಅಂಡ್ ಸರ್ಜರಿ)<br>ಮಾಸ್ಟರ್ ಆಫ್ ಆಯುರ್ವೇದಿಕ್<br>ಮೆಡಿಸಿನ್ ಅಂಡ್ ಸರ್ಜರಿ | ಡಿ.ಎ.ಎಂ.ಎಸ್.<br>ಬಿ.ಎ.ಎಂ.ಎಸ್.<br>ಎಂ.ಎ.ಎಂ.ಎಸ್. | 1932 ರಿಂದ<br>1940ರ ವರೆಗೆ.<br>1932 ರಿಂದ<br>1940ರ ವರೆಗೆ.<br>1932ರಿಂದ 1940ರ<br>ವರೆಗೆ |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯು 82, ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

| | 1 | 2 | 3 | 4 |
|---|---|---|---|---|
| 9. | 1[ ಯುನಿವರ್ಸಿಟಿ ಆಫ್ ಕಲ್ಕತ್ತಾ, ಕಲ್ಕತ್ತಾ. | ಆಯುರ್ವೇದಾಚಾರ್ಯ (ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಎ.ಎಂ.ಎಸ್. | 1982ರಿಂದ ಮುಂದಕ್ಕೆ]1 |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯು 82, ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

**[1][ಪ್ರಕೃತಿ ಚಿಕಿತ್ಸೆ**

**ಆಂಧ್ರ ಪ್ರದೇಶ**

| | | | | |
|---|---|---|---|---|
| 1. | ಗಾಂಧಿ ನೇಚರ್ ಕ್ಯೂರ್ ಕಾಲೇಜ್, ಹೈದರಾಬಾದ್. | ಡಿಪ್ಲೊಮಾ ಇನ್ ನ್ಯಾಚುರೋಪತಿ 4 ವರ್ಷಗಳ ಅವಧಿ. | | |

1. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆಸೇರಿಸಲಾಗಿದೆ.

ಉತ್ತರ ಪ್ರದೇಶ

| | | | | |
|---|---|---|---|---|
| 1. | ನ್ಯಾಷನಲ್ ಕಾಲೇಜ್ ಆಫ್ ನ್ಯಾಚುರೋಪತಿ ಅಂಡ್ ರೀಸರ್ಚ್, ಲಕ್ನೋ. | ಡಿಪ್ಲೊಮೋ ಇನ್ ನೇಚರ್ ಕ್ಯೂರ್ 4 ವರ್ಷಗಳ ಅವಧಿ. | | |

**ಕರ್ನಾಟಕ**

| | | | | |
|---|---|---|---|---|
| 1. | ಭಾರತೀಯ ಔಷಧಗಳ ಅಧ್ಯಯನ ಮಂಡಲಿ, ಕರ್ನಾಟಕ, ಬೆಂಗಳೂರು. | ಪ್ರಕೃತಿ ಚಿಕಿತ್ಸೆ ಮತ್ತು ಯೋಗದಲ್ಲಿ ಡಿಪ್ಲೊಮೊ. | | |

**ಸಿದ್ಧ ವೈದ್ಯ ಪದ್ಧತಿ**

**ತಮಿಳುನಾಡು**

| | | | | |
|---|---|---|---|---|
| 1. | ಯೂನಿವರ್ಸಿಟಿ ಆಫ್ ಮದ್ರಾಸು, ಮದ್ರಾಸ್. | ಬ್ಯಾಚುಲರ್ ಆಫ್ ಇಂಡಿಯನ್ ಮೆಡಿಸಿನ್ (ಸಿದ್ಧ ) | ಬಿ.ಐ.ಎಂ.(ಸಿದ್ಧ) | 1965 ರಿಂದ 1970ರ ವರೆಗೆ. |
| 2. | ಮಧುರೈ ಕಾಮರಾಜ್ ಯೂನಿವರ್ಸಿಟಿ, ಮಧುರೈ | ಬ್ಯಾಚುಲರ್ ಆಫ್ ಇಂಡಿಯನ್ ಮೆಡಿಸಿನ್ (ಸಿದ್ಧ )<br>ಡಾಕ್ಟರ್ ಆಫ್ ಮೆಡಿಸಿನ್ (ಸಿದ್ಧ).<br>ಬ್ಯಾಚುಲರ್ ಆಫ್ ಸಿದ್ಧ ಮೆಡಿಸಿನ್ ಆಂಡ್ ಸರ್ಜರಿ. | ಬಿ.ಐ.ಎಂ.(ಸಿದ್ಧ)<br>ಎಂ.ಡಿ.(ಸಿದ್ಧ)<br>ಬಿ.ಎಸ್.ಅಂಡ್ ಎಂ.ಎಸ್. | 1975 ರಿಂದ ಮುಂದಕ್ಕೆ<br>1975 ರಿಂದ ಮುಂದಕ್ಕೆ<br>1982 ರಿಂದ ಮುಂದಕ್ಕೆ][1] |

**ಯುನಾನಿ**

**[1][ಆಂಧ್ರಪ್ರದೇಶ]1**

| | | | | |
|---|---|---|---|---|
| 1. | ಶ್ರೀ ವೆಂಕಟೇಶ್ವರ ಯೂನಿವರ್ಸಿಟಿ | ತಬೀಬ್ –ಎ–ಕಾಮಿಲ್ | ------------ | 1957 ರಿಂದ 1982 ರ ವೆರೆಗೆ. |
| | | [2][ಕಾಮಿಲ್ –ಎ–ತಿಬ್–ಓ–ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ) | ಬಿ.ಯು.ಎಂ.ಎಸ್. | 1985 ರಿಂದ ಮುಂದಕ್ಕೆ][2] |

1. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯು 82, ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಪ್ರತಿಯೋಜಿಸಲಾಗಿದೆ. ಪುಟ 49 ರಲ್ಲಿದೆ.

2. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯು 82, ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

| | 1 | 2 | 3 | 4 |
|---|---|---|---|---|
| 2. | ನಿಜಾಮಿಜ್ ತಿಬ್ಬಿ ಕಾಲೇಜ್, ಹೈದರಾಬಾದ್ | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ.<br>ತಬೀಬ್ –ಎ–ಮುಸ್ತಾನಾದ್<br>ಗ್ರ್ಯಾಜುಯೇಟ್ ಆಫ್ ದಿ ಕಾಲೇಜ್ ಆಫ್ ಯುನಾನಿ ಮೆಡಿಸಿನ್.<br>ತಬೀಬ್– ಮಾಹಿರ್. | ಬಿ.ಯು..ಎಂ.ಎಸ್.<br><br>ಜಿ.ಸಿ.ಯು.ಎಂ. | |
| 3. | ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್, ಹೈದರಾಬಾದ್ | ಕಾಮಿಲ್ – ಎ – ತಿಬ್–ಒ–ಜರಾಹತ್ (ಬ್ಯಾಚುಲರ್ ಆಫ್ ಮೆಡಿಸಿನ್ ಅಂಡ್ ಯುನಾನಿ ಸರ್ಜರಿ). | ಬಿ.ಎಂ.ಯು.ಎಸ್. | 1955 ರಿಂದ 1975 ರ ವರೆಗೆ |
| 4. | ಒಸ್ಮಾನಿಯಾ ಯೂನಿವರ್ಸಿಟಿ, ಹೈದರಾಬಾದ್ | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ.<br>ಕಾಮಿಲ್ – ಎ – ತಿಬ್–ಒ–ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ).<br>ಡಾಕ್ಟರ್ ಆಫ್ ಯುನಾನಿ ಮೆಡಿಸಿನ್. | ಬಿ.ಯು.ಎಂ.ಎಸ್.<br><br>ಬಿ.ಯು.ಎಂ.ಎಸ್.<br>ಎಂ.ಡಿ.(ಯುನಾನಿ) | 1976 ರಿಂದ ಮುಂದಕ್ಕೆ<br><br>1982 ರಿಂದ ಮುಂದಕ್ಕೆ.<br>1976 ರಿಂದ ಮುಂದಕ್ಕೆ. |
| | **ಬಿಹಾರ್** | | | |
| 1. | ಸ್ಟೇಟ್ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಮೆಡಿಸಿನ್, ಪಾಟ್ನಾ, ಬಿಹಾರ್. | ಗ್ರ್ಯಾಜುಯೇಟ್ ಇನ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ. | ಜಿ.ಯು.ಎಂ.ಎಸ್. | 1953 ರಿಂದ ಮುಂದಕ್ಕೆ |
| 2. | ಬಿಹಾರ್ ಯೂನಿವರ್ಸಿಟಿ ಮುಸಫರ್‌ಪುರ್. | ಗ್ರ್ಯಾಜುಯೇಟ್ ಇನ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ.<br>ಕಾಮಿಲ್ – ಎ – ತಿಬ್–ಒ–ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ). | ಜಿ.ಯು.ಎಂ.ಎಸ್.<br><br>ಬಿ.ಯು.ಎಂ.ಎಸ್. | 1973 ರಿಂದ 1982 ರ ವರೆಗೆ.<br>1982 ರಿಂದ ಮುಂದಕ್ಕೆ. |
| | **ದೆಹಲಿ** | | | |
| 1. | ಬೋರ್ಡ್ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಡೆಲ್ಲಿ. | ಬ್ಯಾಚುಲರ್ ಇನ್ ಇಂಡಿಯನ್ ಮೆಡಿಸಿನ್ ಆಂಡ್ ಸರ್ಜರಿ.<br>ಕಾಮಿಲ್ – ಎ – ತಿಬ್–ಒ–ಜರಾಹತ್ (ಡಿಪ್ಲೊಮೋ ಇನ್ ಇಂಡಿಯನ್ ಮೆಡಿಸಿನ್ ಅಂಡ್ ಸರ್ಜರಿ).<br><br>ಕಾಮಿಲ್ – ಎ – ತಿಬ್–ಒ–ಜರಾಹತ್. | <br><br>ಡಿ.ಐ.ಎಂ.ಎಸ್. | 1958 ರಿಂದ 1963 ರ ವರೆಗೆ.<br><br>1956–1963ರ ವರೆಗೆ. |
| 2. | ಆಯುರ್ವೇದಿಕ್ ಅಂಡ್ ಯುನಾನಿ ತಿಬ್ಬ ಕಾಲೇಜ್, ಡೆಲ್ಲಿ. | ಫಾಜಿಲ್ –ತಿಬ್– ಒ– ಜರಾಹತ್<br>ಕಾಮಿಲ್ – ಎ – ತಿಬ್–ಒ–ಜರಾಹತ್. | -----<br>----- | 1958ರ ವರೆಗೆ<br>1958ರ ವರೆಗೆ |
| 3. | ಜಾಮಿಯಾ ತಿಬ್ಬಾ, ಡೆಲ್ಲಿ | ಅಕ್ಮಲ್ –ಉಲ್ –ಹುಕ್ಮಾ<br>ಅಫಜಲ್– ಉಲ್– ಹುಕ್ಮಾ. | -----<br>----- | 1958ರ ವರೆಗೆ.<br>1958ರ ವರೆಗೆ. |

| | 1 | 2 | 3 | 4 |
|---|---|---|---|---|
| 4. | ಎಕ್ಸಾಮಿನಿಂಗ್ ಬಾಡಿ, ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಡೆಲ್ಲಿ. | ಫಾಜಿಲ್ –ಎ– ತಿಬ್ –ಒ – ಜರಾಹತ್ (ಬ್ಯಾಚುಲರ್ ಇನ್ ಇಂಡಿಯನ್ ಮೆಡಿಸಿನ್ ಅಂಡ್ ಸರ್ಜರಿ). ಬ್ಯಾಚುಲರ್ ಆಫ್ ಯುನಾನಿ ಮೆಡಿಸನ್ ಅಂಡ್ ಸರ್ಜರಿ. | ಬಿ.ಐ.ಎಂ.ಎಸ್. ಬಿ.ಯು.ಎಂ.ಎಸ್. | 1963 ರಿಂದ ಮುಂದಕ್ಕೆ |
| 5. | ಡೆಲ್ಲಿ ಯೂನಿವರ್ಸಿಟಿ, ಡೆಲ್ಲಿ. | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ. | | 1979ರಿಂದ ಮುಂದಕ್ಕೆ |

**ಜಮ್ಮು ಮತ್ತು ಕಾಶ್ಮೀರ್**

| | | | | |
|---|---|---|---|---|
| 1. | ಜಮ್ಮು ಅಂಡ್ ಕಾಶ್ಮೀರ ಯೂನಿವರ್ಸಿಟಿ. | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಆಂಡ್ ಸರ್ಜರಿ | ಬಿ.ಯು.ಎಂ.ಎಸ್. | 1966 ರಿಂದ ಮುಂದಕ್ಕೆ |
| 2. | ಕಾಶ್ಮೀರ್ ಯೂನಿವರ್ಸಿಟಿ, ಶ್ರೀನಗರ. | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಯು.ಎಂ.ಎಸ್. | 1969 ರಿಂದ ಮುಂದಕ್ಕೆ |

**1[ಕರ್ನಾಟಕ**

| | | | | |
|---|---|---|---|---|
| 1. | ಭಾರತೀಯ ಔಷಧ ಆಧ್ಯಯನ ಮಂಡಲಿ, ಕರ್ನಾಟಕ, ಬೆಂಗಳೂರು. | ತಬೀಬ್ – ಎ – ಹಸೆಕ್ (ಲೈಸೆನ್ಸಿಯೇಟ್ ಇನ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ) | ಎಲ್.ಯು.ಎಂ.ಎಸ್. | 1958ರಿಂದ ಮುಂದಕ್ಕೆ |
| 2. | ಸರ್ಕಾರಿ ಆಯುರ್ವೇದ ಮತ್ತು ಯುನಾನಿ ಕಾಲೇಜ್ (ಕಾಲೇಜ್ ಆಫ್ ಇಂಡಿಯನ್ ಮೆಡಿಸಿನ್) | ತಬಿಬ್ –ಎ– ಹಸೆಕ್ (ಲೈಸೆನ್ಸಿಯೇಟ್ ಇನ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ). | ಎಲ್.ಯು.ಎಂ.ಎಸ್. | 1928 ರಿಂದ 1953 ರ ವರೆಗೆ. |
| 3. | ಭಾರತೀಯ ಔಷಧ ಪದ್ಧತಿಯ ಕೇಂದ್ರ ಮಂಡಲಿ, ಕರ್ನಾಟಕ, ಬೆಂಗಳೂರು. | ತಬಿಬ್ –ಎ– ಹಸೆಕ್ (ಲೈಸೆನ್ಸಿಯೇಟ್ ಇನ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ). | ಎಲ್.ಯು.ಎಂ.ಎಸ್. | 1956 ರಿಂದ 1958 ರ ವರೆಗೆ. |
| 4. | ಸರ್ಕಾರಿ ಆಯುರ್ವೇದ ಶಾಲೆ, ಮೈಸೂರು. | ---- | ಯು.ಎಂ.ಎಸ್. | ------- |
| 5. | ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಆಂಡ್ ಸರ್ಜರಿ. | ಬಿ.ಯು.ಎಂ.ಎಸ್. | 1977 ರಿಂದ ಮುಂದಕ್ಕೆ]1 |

1. ಅಧಿಸೂಚನೆ ಸಂಖ್ಯೆ ಎಚ್‌ಎಫ್‌ಡಿ 82 ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

**ಮಧ್ಯಪ್ರದೇಶ**

| | | | | |
|---|---|---|---|---|
| 1. | ಅಸಿಫಾ ತಿಬ್ಬ ಕಾಲೇಜ್, ಭೋಪಾಲ್ | ಹಕೀಮ್ – ಕಾಮಿಲ್. ತಿಬ್ – ಎ – ಕಾಮೀಲ್. | ---- ---- | ------- -------- |
| 2. | ಸಗರ್ ಯೂನಿವರ್ಸಿಟಿ, ಸಗರ್ | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಯು.ಎಂ.ಎಸ್. | 1973 ರಿಂದ ಮುಂದಕ್ಕೆ |

| | 1 | 2 | 3 | 4 |
|---|---|---|---|---|
| 3. | ಮಹಾಕೋಶಲ್ ಬೋರ್ಡ್ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಜಬಲ್‌ಪುರ್ | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಯು.ಎಂ.ಎಸ್. | 1966 ರಿಂದ 1970 ರ ವರೆಗೆ. |
| 4. | ಮಧ್ಯಪ್ರದೇಶ ಬೋರ್ಡ್ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್ ಅಂಡ್ ನ್ಯಾಚುರೋಪತಿ, ಭೋಪಾಲ್. | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಯು.ಎಂ.ಎಸ್. | 1971 ರಿಂದ 1974 ರ ವರೆಗೆ. |

**ಮಹಾರಾಷ್ಟ್ರ**

| | | | | |
|---|---|---|---|---|
| 1. | ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಮಹಾರಾಷ್ಟ್ರ. | ಮಾಹಿರ್ – ಎ – ತಿಬ್–ಓ– ಜರಾಹತ್ | ಡಿ.ಯು.ಎಸ್.ಎಫ್. (ಬಾಂಬೆ). | -------- |
| 2. | ಬೋರ್ಡ್ ಆಫ್ ಎಕ್ಸಾಮಿನರ್ಸ್ ಇನ್ ಯುನಾನಿ . | ಮಾಹಿರ್ – ಎ – ಜರಾಹತ್. | ಎಂ.ಡಿ.ಜೆ. (ಬಾಂಬೆ) | 1942 ರಿಂದ 1943 ರ ವರೆಗೆ. |
| 3. | ಮಹಾರಾಷ್ಟ್ರ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್ ಮೆಡಿಸಿನ್, ಮುಂಬೈ | ಡಿಪ್ಲೋಮಾ ಇನ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ. | ಡಿ.ಯು.ಎಂ.ಎಸ್. | 1973ರಿಂದ ಮುಂದಕ್ಕೆ. |
| | 1[4. ಬಾಂಬೆ ಯೂನಿವರ್ಸಿಟಿ ಬಾಂಬೆ. | ಕಾಮಿಲ್ – ಎ – ತಿಬ್–ಓ– ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ). | ಬಿ.ಯು.ಎಂ.ಎಸ್. | 1984 ರಿಂದ ಮುಂದಕ್ಕೆ]1. |

1. ಅಧಿಸೂಚನೆ ಸಂಖ್ಯೆ ಎಚ್‌ಎಫ್‌ಡಿ 82 ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

1 [ಕರ್ನಾಟಕ **XXXX**]1

1. ಅಧಿಸೂಚನೆ ಸಂಖ್ಯೆ ಎಚ್‌ಎಫ್‌ಡಿ 82 ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಬಿಟ್ಟು ಬಿಡಲಾಗಿದೆ. ಪುಟ 49 ರಲ್ಲಿದೆ.

**ತಮಿಳುನಾಡು**

| | | | | |
|---|---|---|---|---|
| 1. | ಗೌರ್ನಮೆಂಟ್ ಕಾಲೇಜ್ ಆಫ್ ಇಂಡಿಯನ್/ ಇಂಡಿಜಿನಸ್ / ಇಂಟಿಗ್ರೇಟೆಡ್ ಮೆಡಿಸಿನ್, ಮದ್ರಾಸ್. | ಲೈಸೆನ್ಸಿಯೇಟ್ ಇನ್ ಇಂಡಿಯನ್ / ಇಂಡಿಜೀನಸ್ / ಇಂಟಿಗ್ರೇಟೆಡ್ ಮೆಡಿಸಿನ್. ಗ್ರಾಜುಯೇಟ್ ಆಫ್ ದಿ ಕಾಲೇಜ್ ಆಫ್ ಇಂಡಿಯನ್. ಇಂಡಿಜೀನಸ್ ಇಂಟಿಗ್ರೇಟೆಡ್ ಮೆಡಿಸಿನ್. | ಎಲ್.ಐ.ಎಂ. ಜಿ.ಸಿ.ಐ.ಎಂ. | ------- --------- |

| | 1 | 2 | 3 | 4 |
|---|---|---|---|---|
| 2. | ಬೋರ್ಡ್ ಆಫ್ ಎಕ್ಸಾಮಿನರ್ಸ್ ಇನ್ ಇಂಡಿಯನ್/ ಇಂಡಿಜೀನಸ್/ ಇಂಟಿಗ್ರೇಟೆಡ್ ಮೆಡಿಸಿನ್. | ಹೈಯರ್ ಪ್ರೊಫಿಷಿಯೆನ್ಸಿ ಇನ್ ಇಂಡಿಯನ್ / ಇಂಡಿಜೀನಸ್ / ಇಂಟಿಗ್ರೇಟೆಡ್ ಮೆಡಿಸಿನ್ | ಹೆಚ್.ಪಿ.ಐ.ಎಂ. | ---------- |
| 3. | ಮದ್ರಾಸ್ ಯೂನಿವರ್ಸಿಟಿ, ಮದ್ರಾಸ್. | ಕಾಮಿಲ್ – ಎ – ತಿಬ್–ಓ–ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಆಂಡ್ ಸರ್ಜರಿ). | ಬಿ.ಯು.ಎಂ.ಎಸ್. | 1979ರಿಂದ ಮುಂದಕ್ಕೆ |

**ಪಂಜಾಬ್**

| | | | | |
|---|---|---|---|---|
| 1. | ಭೂಪಿಂದರ್ ತಿಬಿ ಕಾಲೇಜ್, ಪಾಟಿಯಾಲ. | [1][ಹಜಿಕ್– ಉಲ್ – ಹುಕ್ಮಾ<br>ಮಾಹಿರ್ – ಎ – ತಿಬ್–ಓ–ಜರಾಹತ್<br>ತಿಬಿಬ್ ಇ ಅಕ್ಮಲ್ | ಹೆಚ್.ಯು.ಎಂ.<br>ಎಂ.ಟಿ.ಜೆ.<br>ಟಿ.ಎ. | 1927ರಿಂದ 1950ರ ವರೆಗೆ<br>1927 ರಿಂದ 1950ರ ವರೆಗೆ<br>1936 ರಿಂದ 1950ರ ವರೆಗೆ]1 |

1. ಅಧಿಸೂಚನೆ ಸಂಖ್ಯೆ ಎಚ್‌ಎಫ್‌ಡಿ 82 ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಪ್ರತಿಯೋಜಿಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| 2. | ಆಯುರ್ವೇದಿಕ್ ಅಂಡ್ ಯುನಾನಿ ತಿಬಿ ಕಾಲೇಜ್, ಅಮೃತಸರ್. ವೇದಿಕ್ ಅಂಡ್ ಯುನಾನಿ ತಿಬಿ ಕಾಲೇಜ್, ಅಮೃತಸರ್. | ಕಾಮಿಲ್ –ಉಲ್– ತಿಬಿ.<br>ಫಾಜಿಲ್– ಉಲ್– ತಿಬಿ.<br>ಉಮ್ದೋ– ದಾಲ್– ಹುಕ್ಮಾ.<br>[1][ಜಬಾದತ್ – ತಿಲ್ – ಆಲಿಬೆ. | ಕೆ.ಯು.ಟಿ.<br>ಎಫ್.ಯು.ಟಿ.<br>ಹೆಚ್.ಡಿ.ಹೆಚ್.<br>-------- | 1947ರ ವರೆಗೆ.<br>1947ರ ವರೆಗೆ.<br>1947ರ ವರೆಗೆ.<br>1947ರ ವರೆಗೆ.]1 |

ಅಧಿಸೂಚನೆ ಸಂಖ್ಯೆ ಎಚ್‌ಎಫ್‌ಡಿ 82 ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

**ರಾಜಸ್ಥಾನ್**

| | | | | |
|---|---|---|---|---|
| 1.<br><br><br><br>[2][2. | ರಜಪುತಾನ್ ಆಯುರ್ವೇದಿಕ್ ಅಂಡ್ ಯುನಾನಿ ಕಾಲೇಜ್, ಜೈಪುರ್.<br>ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್, ರಾಜಾಸ್ಥಾನ, ಜೈಪುರ್. | [1][ಉಮ್ದೆ –ತುಲ್– ಹುಕ್ಮಾ ತಬೀಬ್ –ಫಿಜೀಲ್.<br>ಕಾಮಿಲ್ – ಎ – ತಿಬ್–ಓ–ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಆಂಡ್ ಸರ್ಜರಿ). | --------<br>--------<br><br>ಬಿ.ಯು.ಎಂ.ಎಸ್. | 1930ರಿಂ 1980ರ ವರೆಗೆ<br>1930 ರಿಂದ 1981 ರ ವರೆಗೆ]1<br><br>1981 ರಿಂದ ಮುಂದಕ್ಕೆ]2. |

1. ಅಧಿಸೂಚನೆ ಸಂಖ್ಯೆ ಎಚ್‌ಎಫ್‌ಡಿ 82 ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಪ್ರತಿಯೋಜಿಸಲಾಗಿದೆ. ಪುಟ 49 ರಲ್ಲಿದೆ.
2. ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯು 82 ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

**ಉತ್ತರಪ್ರದೇಶ**

| | | | | |
|---|---|---|---|---|
| 1. | ಮುಸ್ಲಿಂ ಯೂನಿವರ್ಸಿಟಿ, ಅಲಿಗರ್. | ಡಿಪ್ಲೊಮಾ ಇನ್ ಇಂಡಿಯನ್ ಮೆಡಿಸಿನ್ ಅಂಡ್ ಸರ್ಜರಿ.<br>ಡಿಪ್ಲೊಮಾ ಇನ್ ಇಂಡಿಯನ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ.<br>ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ.<br>ಬ್ಯಾಚುಲರ್ ಆಫ್ ಯುನಾನಿ ತಿಬ್ ಅಂಡ್ ಸರ್ಜರಿ.<br>ಡಾಕ್ಟರ್ ಆಫ್ ಯುನಾನಿ ಮೆಡಿಸಿನ್ | ಡಿ.ಐ.ಎಂ.ಎಸ್.<br>ಡಿ.ಯು.ಎಂ.ಎಸ್.<br>ಬಿ.ಯು.ಎಂ.ಎಸ್.<br>ಬಿ..ಯು.ಟಿ.ಎಸ್.<br>ಡಿ.ಯು.ಎಂ.<br>ಎಂ.ಡಿ.(ಯುನಾನಿ) | 1927 ರಿಂದ 1943 ರ ವರೆಗೆ.<br>1944 ರಿಂದ 1946 ರ ವರೆಗೆ.<br>1953 ರಿಂದ ಮುಂದಕ್ಕೆ.<br>1947 ರಿಂದ 1952 ರ ವರೆಗೆ.<br>1974 ರಿಂದ 1977ರ ವರೆಗೆ.<br>1978 ರಿಂದ ಮುಂದಕ್ಕೆ. |
| | | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ವಿತ್ ಮಾಡರ್ನ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಯು.ಎಂ.ಎಂ.ಐ. | 1972 ರಿಂದ 1983 ರ ವರೆಗೆ. |

| | 1 | 2 | 3 | 4 |
|---|---|---|---|---|
| 2. | ಬೋರ್ಡ್ ಅಫ್ ಇಂಡಿಯನ್ ಮೆಡಿಸಿನ್ ಉತ್ತರಪ್ರದೇಶ, ಲಕ್ನೋ. | ಡಿಪ್ಲೊಮೊ ಇನ್ ಇಂಡಿಜೀನಸ್ ಮೆಡಿಸಿನ್.<br>ಡಿಪ್ಲೊಮೊ ಇನ್ ಇಂಡಿಜೀನಸ್ ಮೆಡಿಸಿನ್ ಅಂಡ್ ಸರ್ಜರಿ.<br>ಬ್ಯಾಚುಲರ್ ಆಫ್ ಇಂಡಿಯನ್ ಮೆಡಿಸಿನ್ ಅಂಡ್ ಸರ್ಜರಿ.<br>ಫಾಜಿಲ್ ಉಲ್ ತಿಬ್ (ಬ್ಯಾಚುಲರ್ ಆಫ್ ಮೆಡಿಸಿನ್ ಅಂಡ್ ಸರ್ಜರಿ). | ಡಿ.ಐ.ಎಂ.<br>ಡಿ.ಐ.ಎಂ.ಎಸ್.<br>ಬಿ.ಐ.ಎಂ.ಎಸ್.<br>ಎಫ್.ಎಂ.ಬಿ.ಎಸ್. | 1932 ರಿಂದ 1944 ರ ವರೆಗೆ.<br>1943 ರಿಂದ 1946 ರ ವರೆಗೆ.<br>1947 ರಿಂದ 1956ರ ವರೆಗೆ.<br>1957 ರಿಂದ ಮುಂದಕ್ಕೆ. |
| 3. | ಬೋರ್ಡ್ ಆಫ್ ಅರೇಬಿಕ್ ಅಂಡ್ ಪರ್ಶಿಯನ್ ಎಕ್ಸಾಮಿನೇಷನ್ಸ್, ಯು.ಪಿ. ಅಲಹಾಬಾದ್. | ಫಾಜಿಲ್– ಒ –ತಿಬ್. | | 1936 ರಇಂದ 1982 ರವರೆಗೆ |
| 4. | ದರುಲ್ ಉಲೂಮ್, ದಿಯೋಬಂದ್, ಯುಪಿ. | ಫಾಜಿಲ್– ಉಲ್ – ತಿಬ್ | ಡಿ.ಯು.ಎಂ. | 1964 ರಿಂದ 1984 ರ ವರೆಗೆ |
| 5. | ಮುಸ್ಲಿಂ ಯೂನಿವರ್ಸಿಟಿ ಅಲಿಗರ್. | ಕಾಮಿಲ್ –ಎ ತಿಬ್ –ಒ – ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ) | ಬಿ.ಯು.ಎಂ.ಎಸ್. | 1980ರಿಂದ ಮುಂದಕ್ಕೆ |
| 6. | [1][ಕಾನ್ಪುರ್ ಯೂನಿವರ್ಸಿಟಿ, ಕಾನ್ಪುರ್. | ಫಾಜಿಲ್– ಎ –ತಿಬ್– ಒ– ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ವಿತ್ ಮಾರ್ಡ್ನ್ ಮೆಡಿಸಿನ್ ಅಂಡ್ ಸರ್ಜರಿ) | ಬಿ.ಯು.ಎಂ.ಎಸ್. | 1972ರಿಂದ 1982 ರ ವರೆಗೆ. |

1. ಅಧಿಸೂಚನೆ ಸಂಖ್ಯೆ ಎಚ್‌ಎಫ್‌ಡಿ 82 ಪಿಟಿಡಿ 88, ದಿನಾಂಕ 21/23.12.1988ರ ಮೂಲಕ ಸೇರಿಸಲಾಗಿದೆ. ಪುಟ 49 ರಲ್ಲಿದೆ.

| | | | | |
|---|---|---|---|---|
| | | ಕಾಮಿಲ್ –ಎ –ತಿಬ್ –ಒ – ಜರಾಹತ್ (ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ಅಂಡ್ ಸರ್ಜರಿ) | ಬಿ.ಯು.ಎಂ.ಎಸ್. | 1983 ರಿಂದ ಮುಂದಕ್ಕೆ]1 |
| 1[7. | ಜಮೀಯಾತೂನ್ ನಕ್ಬ ಯುನಾನಿ ಮೆಡಿಕಲ್ ಸ್ಕೂಲ್, ಅಲಹಾಬಾದ್. | ಮತಾಮಿದುರ್ತ್ ತಿಬ್– ವಲ್ ಜರಾಹತ್ | ಎಂ.ಯು.ಎಂ.ಎಸ್. | 1908ರಿಂದ 1942ರ ವರೆಗೆ]1 |

[1][ಯೋಗ

**ಕರ್ನಾಟಕ**

| | | | | |
|---|---|---|---|---|
| 1. | ಭಾರತೀಯ ಔಷಧ ಪದ್ಧತಿಗಳ ಅಧ್ಯಯನ ಮಂಡಲಿ, ಕರ್ನಾಟಕ, ಬೆಂಗಳೂರು. | ಡಿಪ್ಲೊಮೋ ಇನ್ ನ್ಯಾಚುರೋಪತಿ ಅಂಡ್ ಯೋಗ.][1] | ---------- | ---------- |

1. 1992ರ ಅಧಿನಿಯಮ 11ರ ಮೂಲಕ 24.4.1992ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

ಸಮಗ್ರ ಔಷಧ

| | 1 | 2 | 3 | 4 |
|---|---|---|---|---|
| 1. | ಗೌರ್ನಮೆಂಟ್ ಆಯುರ್ವೇದಿಕ್ ಯುನಾನಿ ಕಾಲೇಜ್ (ಕಾಲೇಜ್ ಆಫ್ ಇಂಡಿಯನ್ ಮೆಡಿಸಿನ್) ಮೈಸೂರು. | ಆಯುರ್ವೇದಿಕ್ ವಿದ್ವತ್ ಮತ್ತು ಎಲ್.ಎ.ಎಂ.ಎಸ್. | ಎಲ್.ಎ.ಎಂ.ಎಸ್. | ----- |
| | (ಎ) ಗವರ್ನ್‌ಮೆಂಟ್ ಆಯುರ್ವೇದಿಕ್ ಯುನಾನಿ ಕಾಲೇಜ್ (ಕಾಲೇಜ್ ಆಫ್ ಇಂಡಿಯನ್ ಮೆಡಿಸಿನ್) ಮೈಸೂರು. | ಆಯುರ್ವೇದಿಕ್ ವಿದ್ವತ್ ಮತ್ತು ಎಲ್.ಎ.ಎಂ.ಎಸ್. | ಎಲ್.ಎ.ಎಂ.ಎಸ್. | ------ |
| | (ಬಿ) ಭಾರತೀಯ ಔಷಧ ಪದ್ಧತಿಗಳ ಅಧ್ಯಯನ ಮಂಡಲಿ. | ಆಯುರ್ವೇದಿಕ್ ವಿದ್ವತ್ ಮತ್ತು ಎಲ್.ಎ.ಎಂ.ಎಸ್. | ಎಲ್.ಎ.ಎಂ.ಎಸ್. | ----- |
| | (ಸಿ) ಭಾರತೀಯ ಔಷಧ ಪದ್ಧತಿಗಳ ಕೇಂದ್ರ ಮಂಡಲಿ. | ಆಯುರ್ವೇದಿಕ್ ವಿದ್ವತ್ ಮತ್ತು ಎಲ್.ಎ.ಎಂ.ಎಸ್. | ಎಲ್.ಎ.ಎಂ.ಎಸ್. | ----- |
| | (ಡಿ) ಈ ಸಂಬಂಧವಾಗಿ ಪ್ರಮಾಣಪತ್ರವನ್ನು ನೀಡಲು ಸರ್ಕಾರದಿಂದ ಯುಕ್ತ ಅಧಿಕಾರ ಪಡೆದ ಸಮಿತಿ ಅಥವಾ ಯಾವುದೇ ಪ್ರಾಧಿಕಾರ. | ಆಯುರ್ವೇದಿಕ್ ವಿದ್ವತ್ ಮತ್ತು ಎಲ್.ಎ.ಎಂ.ಎಸ್. | ಎಲ್.ಎ.ಎಂ.ಎಸ್. | ------ |
| 1. | ತಾರಾನಾಥ ಆಯುರ್ವೇದ ವಿದ್ಯಾಪೀಠ, ಬಳ್ಳಾರಿ | ಆಯುರ್ವೇದಿಕ್ ವಿದ್ವತ್ ಮತ್ತು ಎಲ್.ಎ.ಎಂ.ಎಸ್. | ಎಲ್.ಎ.ಎಂ.ಎಸ್. | 1953 ರಿಂದ ಅಕ್ಟೋಬರ್ ನಿಂದ |
| 2. | ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ ಆಫ್ ಮೆಡಿಸಿನ್, ಬಾಂಬೈ. | ಆಯುರ್ವೇದ ವಿಶಾರದ | ಡಿ.ಎ.ಎಸ್.ಎಫ್. | ----- |
| 3. | ಬನಾರಸ್ ಹಿಂದೂ ಯೂನಿವರ್ಸಿಟಿ, ಬನಾರಸ್. | ಆಯುರ್ವೇದಾಚಾರ್ಯ ವಿತ್ ಮಾಡರ್ನ್ ಮೆಡಿಸಿನ್ ಅಂಡ್ ಸರ್ಜರಿ). | ಎ.ಎಂ.ಎಂ.ಎಸ್. | -------- |
| 4. | ಬನಾರಸ್ ಹಿಂದೂ ಯೂನಿವರ್ಸಿಟಿ, ಬನಾರಸ್. | ಆಯುರ್ವೇದಾಚಾರ್ಯ ವಿತ್ ಬ್ಯಾಚುಲರ್ ಆಫ್ ಮೆಡಿಸಿನ್ ಅಂಡ್ ಸರ್ಜರಿ). | ಎ.ಬಿ.ಎಂ.ಎಸ್. | ---------- |

| | 1 | 2 | 3 | 4 |
|---|---|---|---|---|
| 5. | ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ ಆಫ್ ಮೆಡಿಸಿನ್, ಬಾಂಬೈ. | ಗ್ರಾಜುಯೇಟ್ ಆಫ್ ದಿ ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಮೆಡಿಸಿನ್. | ಜಿ.ಎಫ್.ಎ.ಎಂ. | ---------- |
| 6 | ಬೋರ್ಡ್ ಆಫ್ ಎಕ್ಸಾಮಿನೇಷನ್ ಇನ್ ಇಂಡಿಜಿನಸ್ / ಇಂಟಿಗ್ರೇಟೆಡ್ ಮೆಡಿಸಿನ್, ಮದ್ರಾಸ್. | ಜಿ.ಸಿ.ಐ.ಎಂ. | ಜಿ.ಸಿ.ಐ.ಎಂ. | ---------- |
| 7. | ಅದೇ | ಎಲ್.ಐ.ಎಂ. | ಎಲ್.ಐ.ಎಂ. | -------- |
| 8. | ಅದೇ | ಎ.ಐ.ಎಂ. | ಎ.ಐ.ಎಂ. | -------- |
| 9. | ಅದೇ | ಎ.ಎಲ್.ಐ.ಎಂ. | ಎ.ಎಲ್.ಐ.ಎಂ. | -------- |
| 10. | ಅದೇ | ಎಫ್.ಐ.ಎಂ. | ಎಫ್.ಐ.ಎಂ. | -------- |
| 11. | ಗವರ್ನಮೆಂಟ್ ಆಯುರ್ವೇದಿಕ್ ಕಾಲೇಜು, (ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್) ಹೈದರಾಬಾದ್ (ಎಪಿ). | ಆಯುರ್ವೇದ ವಿಶಾರದ. | ಜಿ.ಸಿ.ಎ.ಎಂ. | -------- |
| 12. | ಪ್ರೇಮ ವಿದ್ಯಾಪೀಠ, ತುಂಗಭದ್ರಾ.. | ಆಯುರ್ವೇದ ಚೂಡಾಮಣಿ. | -------- | -------- |
| 13. | ಪ್ರೇಮ ವಿದ್ಯಾಪೀಠ, ತುಂಗಭದ್ರಾ. | ಆಯುರ್ವೇದ ಶಿರೋಮಣಿ. | -------- | -------- |
| 14. | ಪ್ರೇಮ ವಿದ್ಯಾಪೀಠ, ತುಂಗಭದ್ರಾ. | ಭಿಷಗಿಂದು. | -------- | -------- |
| 15. | ಪ್ರೇಮ ವಿದ್ಯಾಪೀಠ, ತುಂಗಭದ್ರಾ. | ವೈದ್ಯಗುರು. | ------ | -------- |
| 16. | ಯೂನಿವರ್ಸಿಟಿ ಆಫ್ ಕೇರಳ, ತ್ರಿವೇಂಡ್ರಮ್. | ಬಿ.ಎ.ಎಂ. | ಬಿ.ಎ.ಎಂ. | ------- |
| 17. | ಪೂನಾ ಯೂನಿವರ್ಸಿಟಿ ಪೂನಾ. | ಬಿ.ಎ.ಎಂ.ಎಸ್. | ಬಿ.ಎ.ಎಂ.ಎಸ್. | ---------- |
| 18. | ಗವರ್ನ್‌ಮೆಂಟ್ ಆರ್ಯುವೇದಿಕ್ ಮತ್ತು ಯುನಾನಿ ಕಾಲೇಜ್ (ಇಂಡಿಯನ್ ಮೆಡಿಸಿನ್ ಕಾಲೇಜ್) ಮೈಸೂರು. | ತಬೀಬ್– ಹಸಿಖ್ ವೈದ್ಯ ವಾಚಸ್ಪತಿ | ಎಲ್.ಯು.ಎಂ.ಎಸ್. | |
| 19. | ತಾರಾನಾಥ ಆಯುರ್ವೇದ ವಿದ್ಯಾಪೀಠ, ಮುಂಬೈ. | ವೈದ್ಯ ಪ್ರವೀಣ. | ------ | |

| | 1 | 2 | 3 | 4 |
|---|---|---|---|---|
| 20 | ಭಾರತೀಯ ಔಷಧ ಪದ್ಧತಿಗಳ ಅಧ್ಯಯನ ಮಂಡಲಿ, ಬೆಂಗಳೂರು. | ಗ್ರಾಜುಯೇಟ್ ಕೋರ್ಸ್ ಆಫ್ ಇಂಡಿಯನ್ ಮೆಡಿಸಿನ್. | ಜಿ.ಸಿ.ಐ.ಎಂ. | |
| 21. | ದಯಾನಂದ ಆಯುರ್ವೇದೀಯ ಕಾಲೇಜ್, ಲಾಹೋರ್ ಮತ್ತು ಜಲಂಧರ್. | ವೈದ್ಯವಾಚಸ್ಪತಿ | --------- | 1947ಕ್ಕೂ ಮೊದಲು |
| 22 | ಕರ್ನಾಟಕ ಆಯುರ್ವೇದೀಯ ವಿದ್ಯಾಪೀಠ, ಬೆಳಗಾಂ. | ಭಿಷಗ್ವಾರ್ | ------- | --------- |
| 23 | ತಿಲಕ್ ಮಹಾರಾಷ್ಟ್ರ ವಿದ್ಯಾಪೀಠ, ಪೂನಾ. | ಆಯುರ್ವೇದ ವಿಶಾರದ | ------- | (1942 ಕ್ಕೂ ಮೊದಲು) |
| 24 | ಆಯುರ್ವೇದ ಮಹಾವಿದ್ಯಾಲಯ, ಅಹಮದ್ ನಗರ. | ಆಯುರ್ವೇದ ತಿರ್ಥ | ------- | 1942ಕ್ಕೂ ಮೊದಲು |
| 25 | ಆರ್ಯನಗಿ ವೈದ್ಯಕ್ ಮಹಾವಿದ್ಯಾಲಯ, ಸತಾರಾ. | ಆಯುರ್ವೇದ ವಿಶಾರದ. | ------- | 1942ಕ್ಕೂ ಮೊದಲು |
| 26 | ಯೂನಿವರ್ಸಿಟಿ ಆಫ್ ಕೇರಳ, ತ್ರಿವೇಂಡ್ರಮ್. | ಡಿಪ್ಲೊಮೋ ಇನ್ ಆಯುರ್ವೇದಿಕ್ ಮೆಡಿಸಿನ್. | ಡಿ.ಎ.ಎಂ. | ----- |
| 27 | ಫ್ಯಾಕಲ್ಟಿ ಆಫ್ ಆಯುರ್ವೇದಿಕ್ ಅಂಡ್ ಯುನಾನಿ ಸಿಸ್ಟಮ್ಸ್ ಆಫ್‌ಮೆಡಿಸಿನ್, ಬಾಂಬೈ. | ಮಾಹಿರ್ –ಎ –ತಿಬ್ –ಒ – ಜರಾಹತ್. | ಡಿ.ಯು.ಎಸ್.ಎಫ್. | ------ |
| 28 | ಬೋರ್ಡ್ ಆಫ್ ಎಕ್ಸಾಮಿನೇಷನ್ಸ್ ಇನ್ ಯುನಾನಿ, ಬಾಂಬೈ. | ಮಾಹಿರ್ –ಎ –ತಿಬ್ –ಒ – ಜರಾಹತ್. | --------- | (1942ರಿಂದ 1943ರ ಅವಧಿಯಲ್ಲಿ ಪಡೆದುದು). |
| 29 | ಆಯುರ್ವೇದ ಮತ್ತು ಯುನಾನಿ ತಿಬಿ ಕಾಲೇಜ್, ಡೆಲ್ಲಿ. | ಕಾಮಿಲ್ –ಎ –ತಿಬ್ –ಒ – ಜರಾಹತ್. | ----------- | --------- |
| 30 | ಆಯುರ್ವೇದ ಮತ್ತು ಯುನಾನಿ ತಿಬಿ ಕಾಲೇಜ್, ಡೆಲ್ಲಿ. | ಫಾಜಿಲ್–ಎ–ತಿಟ್–ಬ–ಜರಾಹತ್ | ---------- | --------- |
| 31. | ಸರ್ಕಾರಿ ನಿಜಾಮಿಯಾ ತಿಬಿ ಕಾಲೇಜ್, ಹೈದರಾಬಾದ್ | ಕಾಮಿಲ್ –ಎ –ತಿಬ್ –ಒ – ಜರಾಹತ್. | ಬಿ.ಎಂ.ಯು.ಎಸ್. | --------- |
| 32 . | ಅಲಿಗರ್ ಮುಸ್ಲಿಂ ಯೂನಿವರ್ಸಿಟಿ, ಅಲಿಗರ್. | ಬ್ಯಾಚುಲರ್ ಇನ್ ಯುನಾನಿ ಮೆಡಿಸಿನ್ ಅಂಡ್ ಸರ್ಜತ. | ಬಿ.ಎಂ.ಯು.ಎಸ್. | --------- |

| | 1 | 2 | 3 | 4 |
|---|---|---|---|---|
| 33. | ಭಾರತೀಯ ಔಷಧ ಪದ್ಧತಿಗಳ ಸರ್ಕಾರಿ ಕಾಲೇಜ್, ಬೆಂಗಳೂರು. | ಬ್ಯಾಚುಲರ್ ಆಫ್ ಆಯುರ್ವೇದಿಕ್ ಮೆಡಿಸಿನ್ ಅಂಡ್ ಸರ್ಜರಿ – ಭಾರತದಲ್ಲಿ ಕಾನೂನು ಸಮ್ಮತವಾಗಿ ಸ್ಥಾಪನೆಯಾದ ಒಂದು ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡು ಮಾನ್ಯತೆ ಪಡೆದ ಸಂಸ್ಥೆಯ ಆಯುರ್ವೇದದಲ್ಲಿ ನಿಯತವಾದ 5 1/2 ವರ್ಷಗಳ ವ್ಯಾಸಂಗ ಕ್ರಮದ ತರುವಾಯ ಆಧುನಿಕ ಔಷಧ (ತುರ್ತುಕಾಲದ ಔಷಧ) ಪದ್ಧತಿಯಲ್ಲಿ ಒಂದೂವರೆ ವರ್ಷಗಳ ಅಲ್ಪಾವದಿಯ ವ್ಯಾಸಂಗ ಕ್ರಮ. | ಬಿ.ಎ.ಎಂ.ಎಸ್. | --------- |
| 34. | ಅಲಿಗರ್ ಮುಸ್ಲಿಂ ಯೂನಿವರ್ಸಿಟಿ, ಅಲಿಗರ್. | ಬ್ಯಾಚುಲರ್ ಆಫ್ ಯುನಾನಿ ಮೆಡಿಸಿನ್ ವಿತ್ ಮಾಡರ್ನ್ ಮೆಡಿಸಿನ್ ಅಂಡ್ ಸರ್ಜರಿ. | ಬಿ.ಯು.ಎಂ.ಎಂ.ಎಸ್. | --------- |

**ಟಿಪ್ಪಣಿ:**

1. ಕ್ರಮಸಂಖ್ಯೆ 1 (ಎ) ಅನ್ನು ಅಧಿಸೂಚನೆ ಸಂಖ್ಯೆ ಪಿಎಚ್ ಎಸ್ 379 ಪಿಐಎಂ 66, ದಿನಾಂಕ 8ನೇ ಮಾರ್ಚ್ 1967ರ ಮೂಲಕ ಸೇರಿಸಲಾಗಿದೆ.
2. ಕ್ರಮ ಸಂಖ್ಯೆ 2,3,4,5 ಇವುಗಳನ್ನು ಸ್ಥಳೀಯ ಔಷಧದ ಅಡಿಯಲ್ಲಿ , ಅದಕ್ಕೆ ಒಳಪಟ್ಟು ಅಲ್ಲಿಯೇ ಉಳಿಸಲಾಗಿದೆ.
3. ಕ್ರಮ ಸಂಖ್ಯೆ 20 ರಿಂದ 26 ರ ವರೆಗೆ, ಅಧಿಸೂಚನೆ ಸಂಖ್ಯೆ ಪಿಎಚ್ ಎಸ್ 379 ಪಿಐಎಂ 66, ದಿನಾಂಕ 8ನೇ ಮಾರ್ಚ್ 1967ರ ಮೂಲಕ ಸೇರಿಸಲಾಗಿದೆ.
4. ಕ್ರಮ ಸಂಖ್ಯೆ 27 ರಿಂದ 32 ರ ವರೆಗೆ, ಅಧಿಸೂಚನೆ ಸಂಖ್ಯೆ ಎಚ್ ಎಂ ಎ 30 ಪಿಐಎಂ 67, ದಿನಾಂಕ 25/27ನೇ ನವೆಂಬರ್ 1967ರ ಮೂಲಕ ಸೇರಿಸಲಾಗಿದೆ.
5. ಕ್ರಮ ಸಂಖ್ಯೆ 33 ಅನ್ನು ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 4 ಪಿ ಟಿ ಡಿ 82, ದಿನಾಂಕ 22ನೇ ಮಾರ್ಚ್ 1983ರ ಮೂಲಕ ಸೇರಿಸಲಾಗಿದೆ.
6. ಕ್ರಮ ಸಂಖ್ಯೆ 34 ಅನ್ನು ಅಧಿಸೂಚನೆ ಸಂಖ್ಯೆ ಎಚ್ ಎಫ್ ಡಬ್ಲ್ಯೂ 55 ಪಿ ಟಿ ಡಿ 81, ದಿನಾಂಕ 6ನೇ ಅಕ್ಟೋಬರ್ 1984ರ ಮೂಲಕ ಸೇರಿಸಲಾಗಿದೆ.]1

## ಅಧಿಸೂಚನೆ

### I

**ಬೆಂಗಳೂರು, ದಿನಾಂಕ 23 ನೇ ಜನವರಿ, 1973 [ಎಚ್ಎಂ ಎ 545 ಪಿಐಎಂ 72]**

ಮೈಸೂರು ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ (1962ರ ಮೈಸೂರು ಅಧಿನಿಯಮ ಸಂಖ್ಯೆ 9) 1ನೇ ಪ್ರಕರಣದ (3) ನೇ ಉಪಪ್ರಕರಣದ (ಬಿ) ಖಂಡದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ರಾಜ್ಯಪಾಲರು, ಫೆಬ್ರವರಿ 1ನೇ ದಿನಾಂಕವನ್ನು ಸದರಿ ಅಧಿನಿಯಮದ IIIನೇ ಅಧ್ಯಾಯದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂದು ಗೊತ್ತುಪಡಿಸಿದ್ದಾರೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಪೌರಾಡಳಿತ ಇಲಾಖೆ.

### II

**ಅಧಿಸೂಚನೆಗಳನ್ನು ತಿದ್ದುಪಡಿ ಮಾಡುವ ಅನುಸೂಚಿಗಳು**

**ಬೆಂಗಳೂರು, ದಿನಾಂಕ 9 ನೇ ಜುಲೈ, 1986 [ಸಂ. ಎಚ್ಎಫ್ಡಬ್ಲ್ಯೂ 173 ಪಿಐಎಂ 82]**

ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 9) 21 ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕರ್ನಾಟಕ ಆಯುರ್ವೇದ ಮತ್ತು

ಯುನಾನಿ ವೈದ್ಯ ವೃತ್ತಿ ನಿರತರ ಮಂಡಲಿಯೊಂದಿಗೆ ಸಮಾಲೋಚಿಸಿದ ತರುವಾಯ, ಈ ಮೂಲಕ ಸದರಿ ಅಧಿನಿಯಮಕ್ಕೆ ಸೇರಿದ ಅನುಸೂಚಿಯನ್ನು ಈ ಮುಂದಿನಂತೆ ಪ್ರತಿಯೋಜಿಸುತ್ತದೆ, ಎಂದರೆ:–

**ಅನುಸೂಚಿ**

(ವಿವರಗಳು 536ನೇ ಪುಟದಲ್ಲಿನ ಅಡಿ ಟಿಪ್ಪಣಿ 1 ರಲ್ಲಿ ಬರುವ ಅಧಿನಿಯಮದ ಪಾಠದಲ್ಲಿ ಇರುವಂತೆ.)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ವೆಂಕಟಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

(ದಿನಾಂಕ 4/2/1988ರ ಕರ್ನಾಟಕ ರಾಜ್ಯಪತ್ರ ಭಾಗ –IV 2ಸಿ (ii) ರಲ್ಲಿ ಪ್ರಕಟವಾಗಿದೆ) (ಪುಟ 212– 237ನ್ನು ನೋಡಿ).

**III**

**ಬೆಂಗಳೂರು, ದಿನಾಂಕ 21/23.12.1988, [ಸಂಖ್ಯೆ. ಎಚ್‌ಎಫ್‌ಡಬ್ಲ್ಯೂ 82 ಪಿಟಿಡಿ 88]**

**ಎಸ್.ಓ 712.–** ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 9) 21ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ಮಂಡಲಿಗಳೊಂದಿಗೆ ಸಮಾಲೋಚಿಸಿದ ತರುವಾಯ, ಈ ಮೂಲಕ ಸದರಿ ಅಧಿನಿಯಮಕ್ಕೆ ಸೇರಿದ ಅನುಸೂಚಿಗೆ ಈ ಮುಂದಿನ ತಿದ್ದುಪಡಿಗಳನ್ನು ಮಾಡಿದೆ, ಎಂದರೆ:–

ಅನುಸೂಚಿಯಲ್ಲಿ,–

(ವಿವರಗಳು 537, 538, 539, 541, 542, 548, 550, 551, 552, 553, 556, 557, 558, 559, 561, 563, 564, 565, 566ನೇ ಪುಟಗಳಲ್ಲಿನ ಅಡಿ ಟಿಪ್ಪಣಿಗಳಲ್ಲಿ ಬರುವ ಅಧಿನಿಯಮದ ಪಾಠದಲ್ಲಿ ಇರುವಂತೆ.)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

(ಕರ್ನಾಟಕ ರಾಜ್ಯಪತ್ರ ದಿನಾಂಕ 5/7/1990ರಲ್ಲಿ ಪ್ರಕಟವಾಗಿದೆ. ಅಧಿಸೂಚನೆ ಸಂಖ್ಯೆ ಎಚ್‌ಎಫ್‌ಡಬ್ಲ್ಯೂ 82 ಪಿಟಿಡಿ 88, ದಿನಾಂಕ 21/23.12.1988 ನ್ನು ನೋಡಿ).

**IV**

**ಬೆಂಗಳೂರು, ದಿನಾಂಕ 16 ನೇ ಮಾರ್ಚ್ 1991 [ಸಂಖ್ಯೆ. ಎಚ್‌ಎಫ್‌ಡಬ್ಲ್ಯೂ 136 ಪಿಟಿಡಿ 90]**

**ಎಸ್. ಓ 284.–** ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ನೋಂದಣಿ ಮತ್ತು ವೈದ್ಯಕೀಯ ವೃತ್ತಿ ನಿರತರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 9) 21ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿ ನಿರತರ ಮಂಡಲಿಯೊಂದಿಗೆ ಸಮಾಲೋಚಿಸಿದ ತರುವಾಯ ಸದರಿ ಅಧಿನಿಯಮದ ಅನುಸೂಚಿಗೆ ಈ ಮುಂದಿನಂತೆ ಮತ್ತಷ್ಟು ತಿದ್ದುಪಡಿಯನ್ನು ಮಾಡುತ್ತದೆ, ಎಂದರೆ: –

ಅನುಸೂಚಿಯಲ್ಲಿ,–

(ವಿವರಗಳು 544 ಮತ್ತು 545ನೇ ಪುಟಗಳಲ್ಲಿನ ಅಡಿ ಟಿಪ್ಪಣಿಗಳಲ್ಲಿ ಬರುವ ಅಧಿನಿಯಮದ ಪಾಠದಲ್ಲಿ ಇರುವಂತೆ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

The above translation of the Karnataka Ayurvedic Naturopathy, Siddha, Unani and Yoga (Registration and Medical Practitioners) Miscellaneous Provisions Act, 1961 (35 of 1961) shall be authoritative text in the Kannada Language under section 5A of the Karnataka Official Language Act, 1963

Governor of Karnataka

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1342 **ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ.

ಅಧಿಸೂಚನೆ

ಸಂಖ್ಯೆ: ಸಂವ್ಯಶಾಇ 52 ರಾಶಾಪ್ರ 2007, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2007

The Karnataka (Belgaum and Gulbarga Areas) Religious and Charitable Inams Abolition Act, 1973 (Karnataka Act No. 26 of 1973) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ರ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ (ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶಗಳ) ಧಾರ್ಮಿಕ ಮತ್ತು ಧರ್ಮಾರ್ಥ ಇನಾಮುಗಳ ರದ್ದಿಯಾತಿ ಅಧಿನಿಯಮ, 1973**

**ಪ್ರಕರಣಗಳ ಅನುಕ್ರಮಣಿಕೆ**

ಪ್ರಕರಣಗಳು:

33. ಜಿಲ್ಲಾಧಿಕಾರಿಯಿಂದ ವಿಚಾರಣೆಗಳು
34. ಈ ಅಧಿನಿಯಮದಡಿಯ ಮನವಿಗಳು, ಅರ್ಜಿಗಳು, ಮುಂತಾದವುಗಳ ಮೇಲೆ ಸಂದಾಯ ಮಾಡಬೇಕಾದ ಶುಲ್ಕ
35. ಕೆಲವು ಮೊಕದ್ದಮೆಗಳಲ್ಲಿ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಯನ್ನು ಪ್ರತಿಷೇಧಿಸಲಾಗಿದೆ
36. ನಿಯಮವನ್ನು ರಚಿಸಲು ಅಧಿಕಾರ
37. ದಂಡನೆಗಳು
38. ತೊಂದರೆಗಳನ್ನು ನಿವಾರಿಸುವ ಅಧಿಕಾರ
39. ರಾಜ್ಯ ವಿಧಾನ ಮಂಡಲದ ಮುಂದೆ ನಿಯಮಗಳು ಮತ್ತು ಆದೇಶಗಳನ್ನು ಮಂಡಿಸುವುದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

I

**1973ರ ಅಧಿನಿಯಮ 26.–** ರಾಜ್ಯದ ಮುಂಬಯಿ ಮತ್ತು ಹೈದರಾಬಾದ್ ಪ್ರದೇಶಗಳಲ್ಲಿ ಹೊರತು, ಧಾರ್ಮಿಕ ಮತ್ತು ಧರ್ಮಾರ್ಥ ಇನಾಮುಗಳ ರದ್ದಿಯಾತಿಗಾಗಿ ಉಪಬಂಧ ಕಲ್ಪಿಸಿರುವ ಕಾನೂನುಗಳು ರಾಜ್ಯದಲ್ಲಿ ಈಗಾಗಲೇ ಜಾರಿಯಲ್ಲಿರುತ್ತವೆ. ಈ ಪ್ರದೇಶಗಳಲ್ಲಿಯೂ ಸಹ ಅಂಥ ಇನಾಮುಗಳನ್ನು ರದ್ದುಪಡಿಸಿ, ಇನಾಮುದಾರನ ಎಲ್ಲ ಅಧಿಕಾರಗಳು, ಹಕ್ಕುಗಳು ಮತ್ತು ಹಿತಾಸಕ್ತಿಯನ್ನು ಪಡೆದುಕೊಂಡು ಮತ್ತು ಗೇಣಿದಾರರಿಗೆ ಅಧಿಭೋಗದ ಹಕ್ಕುಗಳನ್ನು ಪ್ರದಾನ ಮಾಡುವುದು ಅವಶ್ಯವಾಗಿರುವುದಾಗಿ ಪರಿಗಣಿಸಲಾಗಿದೆ. ಹೀಗೆ ಪಡೆದುಕೊಳ್ಳುವುದಕ್ಕಾಗಿ ಇನಾಮಿನ ಒಂದು ವರ್ಷದ ನಿವ್ವಳ ಆದಾಯಕ್ಕೆ ಸಮನಾದ ಮೊಬಲಗನ್ನು ಮಾತ್ರ ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಯು ಅಸ್ತಿತ್ವದಲ್ಲಿರುವವರೆಗೂ ವಾರ್ಷಿಕವಾಗಿ ಸಂದಾಯ ಮಾಡಲು ಪ್ರಸ್ತಾಪಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ) ಭಾಗ IV 2ಎ ದಿನಾಂಕ 15.6.1972ರಲ್ಲಿ ಸಂಖ್ಯೆ 235 ಎಂಬುದಾಗಿ ಪುಟ ಸಂಖ್ಯೆ 27ರಲ್ಲಿ ಪ್ರಕಟಿಸಲಾಗಿದೆ.)

II

**1976ರ ತಿದ್ದುಪಡಿ ಮಾಡುವ ಅಧಿನಿಯಮ 53.–** ಮೈಸೂರು (ಮುಂಬಯಿ ಮತ್ತು ಹೈದರಾಬಾದ್ ಪ್ರದೇಶಗಳ) ಧಾರ್ಮಿಕ ಮತ್ತು ಧರ್ಮಾರ್ಥ ಇನಾಮುಗಳ ರದ್ದಿಯಾತಿ ಅಧಿನಿಯಮ, 1973ರ 16ನೇ ಪ್ರಕರಣದಲ್ಲಿ ವರ್ಷಾಶನವಾಗಿ ಸಂದಾಯ ಮಾಡಬೇಕಾದ ಪರಿಹಾರದ ಅಗತ್ಯ ಪ್ರಮಾಣವನ್ನು ಭೂ ಕಂದಾಯದ ಇಪ್ಪತ್ತೈದು ಪಟ್ಟು ನೀಡಲು ಉಪಬಂಧ ಕಲ್ಪಿಸಲಾಗಿದೆ. ಈ ಅಗತ್ಯ ಪ್ರಮಾಣವನ್ನು ಕರ್ನಾಟಕ ಭೂ ಸುಧಾರಣಾ ಅಧಿನಿಯಮ, 1973ರ ಮೇರೆಗೆ ಅನುಮತಿಸಿದ ಗೇಣಿಗೆ ಸಮನಾಗಿರುವಂತೆ ಪರಿಷ್ಕರಿಸಲು ಮತ್ತು ರಾಜ್ಯಗಳ ಹೆಸರಿನ ಮಾರ್ಪಾಡಿನ ಪರಿಣಾಮವಾಗಿ ಕೆಲವು ಪ್ರಾಸಂಗಿಕ ವಿಷಯಗಳಿಗೆ ಸಂಬಂಧಿಸಿದಂತೆ ಸಹ ಬದಲಾವಣೆಗಳನ್ನು ಮಾಡಲು ಪ್ರಸ್ತಾಪಿಸಲಾಗಿದೆ.

(ವಿ.ಸ. ವಿಧೇಯಕ ಸಂಖ್ಯೆ 74ರ 35ರಿಂದ ಪಡೆಯಲಾಗಿದೆ.)

## 1973ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 26

(ಇದನ್ನು ಮೊದಲು ಹದಿಮೂರನೇ ಡಿಸೆಂಬರ್, 1973ರ 1[ಕರ್ನಾಟಕ][1] ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ.)

## [1][ಕರ್ನಾಟಕ][1] [1][(ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶಗಳ)][1] ಧಾರ್ಮಿಕ ಮತ್ತು ಧರ್ಮಾರ್ಥ ಇನಾಮುಗಳ ರದ್ದಿಯಾತಿ ಅಧಿನಿಯಮ, 1973

(1973ರ ನವೆಂಬರ್ ಇಪ್ಪತ್ತಾರನೇ ದಿವಸದಂದು ರಾಷ್ಟ್ರಪತಿಯ ಸಮ್ಮತಿಯನ್ನು ಪಡೆಯಲಾಗಿದೆ.)

(1976ರ ಅಧಿನಿಯಮ 53ರ ಮೂಲಕ ತಿದ್ದುಪಡಿಯಾದಂತೆ)

**[1][ಕರ್ನಾಟಕ][1] ರಾಜ್ಯದ [1][ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶ][1]ಗಳಲ್ಲಿನ ಧಾರ್ಮಿಕ ಮತ್ತು ಧರ್ಮಾರ್ಥ ಇನಾಮುಗಳ ರದ್ದಿಯಾತಿಗಾಗಿ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

[1][ಕರ್ನಾಟಕ][1] ರಾಜ್ಯದ [1][ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶ][1] ಗಳಲ್ಲಿನ ಧಾರ್ಮಿಕ ಮತ್ತು ಧರ್ಮಾರ್ಥ ಇನಾಮುಗಳ ರದ್ದಿಯಾತಿಗಾಗಿ ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಷಯಗಳಿಗೆ ಸಾರ್ವಜನಿಕ ಹಿತದೃಷ್ಟಿಯಿಂದ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಇಪ್ಪತ್ನಾಲ್ಕನೇ ವರ್ಷದಲ್ಲಿ [1][ಕರ್ನಾಟಕ][1] ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:–

1. 1976ರ ಅಧಿನಿಯಮ ಸಂಖ್ಯೆ 53ರ ಮೂಲಕ 18.8.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ I
## ಪ್ರಾರಂಭಿಕ

1. **ಸಂಕ್ಷಿಪ್ತ ಹೆಸರು, ವ್ಯಾಪ್ತಿ, ಅನ್ವಯ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು [1][ಕರ್ನಾಟಕ][1] [1][(ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶಗಳ)][1] ಧಾರ್ಮಿಕ ಮತ್ತು ಧರ್ಮಾರ್ಥ ಇನಾಮುಗಳ ರದ್ದಿಯಾತಿ ಅಧಿನಿಯಮ, 1973 ಎಂದು ಕರೆಯತಕ್ಕದ್ದು.

(2) ಇದು, [1][ಕರ್ನಾಟಕ][1] ರಾಜ್ಯದ [1][ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶ][1]ಗಳಿಗೆ ವ್ಯಾಪ್ತವಾಗುತ್ತದೆ.

(3) ಇದು, [1][ಕರ್ನಾಟಕ][1] ರಾಜ್ಯದ [1][ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶ][1] ಗಳಲ್ಲಿರುವ ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಗಳು ಹೊಂದಿರುವ ಇನಾಮುಗಳಿಗೆ ಅಥವಾ ಅವುಗಳ ಪ್ರಯೋಜನಕ್ಕೆ ಅನ್ವಯಿಸುತ್ತದೆ. ಆದರೆ, ಶಾಲೆಗಳು, ಕಾಲೇಜುಗಳು, ಆಸ್ಪತ್ರೆಗಳು, ಔಷಧಾಲಯಗಳು, ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಗಳ ಅಥವಾ ಯಾವುವೇ ಲಾಭಗಳನ್ನು ಪಡೆಯಲು ಉದ್ದೇಶಿಸಿರದ ಇತರ ಸಾರ್ವಜನಿಕ ಕಾಮಗಾರಿಗಳ ನಿರ್ಮಾಣಕ್ಕಾಗಿ ರಾಜ್ಯ ಸರ್ಕಾರವು ಮಂಜೂರು ಮಾಡಿದ ಉಚಿತ ಕಂದಾಯ ನಿವೇಶನಗಳಿಗೆ ಅನ್ವಯಿಸುವುದಿಲ್ಲ.

(4) ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸ ಬಹುದಾದಂಥ [2][ದಿನಾಂಕ][2]ದಂದು ಇದು ಜಾರಿಗೆ ಬರತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 53ರ ಮೂಲಕ 18.8.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. ಅಧಿನಿಯಮವನ್ನು ಜಾರಿಗೊಳಿಸಿರುವ ಅಧಿಸೂಚನೆಯು ಲಭ್ಯವಿರುವುದಿಲ್ಲ.

**2. ಪರಿಭಾಷೆಗಳು.–** (1) ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಅಧಿನಿಯಮ" ಎಂದರೆ [1][ಕರ್ನಾಟಕ][1] ಭೂ ಕಂದಾಯ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 12) ಎಂದು ಅರ್ಥ;

1. 1976ರ ಅಧಿನಿಯಮ ಸಂಖ್ಯೆ 53ರ ಮೂಲಕ 18.8.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) "ಗೊತ್ತುಪಡಿಸಿದ ದಿನಾಂಕ" ಎಂದರೆ 1ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಗೊತ್ತುಪಡಿಸಿದ ದಿನಾಂಕ ಎಂದು ಅರ್ಥ;

(ಸಿ) "ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶಗಳು" ಎಂದರೆ ರಾಜ್ಯಗಳ ಪುನಾರಚನೆ ಅಧಿನಿಯಮ, 1956 (1956ರ ಕೇಂದ್ರಾಧಿನಿಯಮ 37)ರ 7ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಮತ್ತು (ಸಿ) ಖಂಡಗಳಲ್ಲಿ ಉಲ್ಲೇಖಿಸಿದ ಪ್ರದೇಶಗಳು ಎಂದು ಅರ್ಥ;

(ಡಿ) "ಜಿಲ್ಲಾಧಿಕಾರಿ" ಎಂಬುದರಲ್ಲಿ ಈ ಅಧಿನಿಯಮದ ಮೇರೆಗೆ ಜಿಲ್ಲಾಧಿಕಾರಿಯ ಅಧಿಕಾರಗಳನ್ನು ಚಲಾಯಿಸಲು, ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಅಧಿಸೂಚನೆಯ ಮೂಲಕ ಅಧಿಕೃತಗೊಳಿಸಿದ ಉಪವಿಭಾಗಾಧಿಕಾರಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಯಾರೇ ಅಧಿಕಾರಿಯನ್ನು ಒಳಗೊಳ್ಳುತ್ತದೆ;

(ಇ) "ಇನಾಮು" ಎಂಬುದು ಒಂದು ಇನಾಮು ಗ್ರಾಮ ಮತ್ತು ಅದು ಒಂದು ಸಣ್ಣ ಇನಾಮನ್ನು ಒಳಗೊಳ್ಳುತ್ತದೆ;

(ಎಫ್) "ಇನಾಮುದಾರ" ಎಂದರೆ ಇನಾಮಿನ ಒಡೆತನ ಹೊಂದಿರುವ ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆ ಎಂದು ಅರ್ಥ;

(ಜಿ) "ಇನಾಮು ಭೂಮಿ" ಎಂದರೆ ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆ ಅಥವಾ ಅದರ ಪರವಾಗಿ ಇನಾಮಾಗಿ ಹೊಂದಿರುವ ಭೂಮಿ ಎಂದು ಅರ್ಥ ಮತ್ತು ಇದರಲ್ಲಿ ಮಷ್‌ರತ್ –ಉಲ್ – ಕಿದ್ಮತ್ ಮದತ್–ಎ–ಮಷ್ ಎಂಬಂತೆ ಹೊಂದಿರುವ ಭೂಮಿ ಮತ್ತು ವಕ್ಫ್–ಎ–ತಮಲ್ ಮತ್ತು ವಕ್ಫ್–ಇ–ನಾಮಾ ಎಂಬುದಾಗಿ ದತ್ತಿ ನೀಡಿದ ಭೂಮಿಗಳನ್ನು ಸಹ ಒಳಗೊಳ್ಳುತ್ತವೆ;

(ಎಚ್) "ಇನಾಮು ಗ್ರಾಮ" ಎಂದರೆ ಧಾರ್ಮಿಕ ಅಥವಾ ಧರ್ಮಾರ್ಥ ಸಂಸ್ಥೆಗಳು ಅಥವಾ ಇವುಗಳ ಪರವಾಗಿ ಒಂದು ಇನಾಮು ಆಗಿ ಹೊಂದಿರುವ ಒಂದು ಗ್ರಾಮ ಅಥವಾ ಗ್ರಾಮದ ಭಾಗ ಅಥವಾ ಸಣ್ಣ ಹಳ್ಳಿ ಅಥವಾ ಖಂದ್ರಿಗ ಎಂದು ಅರ್ಥ;

(ಐ) "ಭೂ ದಾಖಲೆಗಳು" ಎಂದರೆ ಅಧಿನಿಯಮದ ಅಥವಾ ಈ ಅಧಿನಿಯಮದ ಉದ್ದೇಶಗಳಿಗಾಗಿ ಸುಸಂಗತವಾಗಿರುವ ಯಾವುದೇ ಇತರ ಕಾನೂನಿನ ಉಪಬಂಧಗಳಡಿ ಅಥವಾ ಉದ್ದೇಶಗಳಿಗಾಗಿ ಇಟ್ಟುಕೊಂಡು ಬಂದಿರುವ ದಾಖಲೆಗಳು;

(ಜೆ) "ಸಣ್ಣ ಇನಾಮು" ಎಂದರೆ ಒಂದು ಇನಾಮು ಗ್ರಾಮವನ್ನು ಹೊರತುಪಡಿಸಿ, ಪರಭಾರೆ ಮಾಡಿದ ಅಥವಾ ಪರಭಾರೆ ಮಾಡದ ಒಂದು ಗ್ರಾಮದಲ್ಲಿ ಇರುವ, ಒಂದು ಪರಭಾರೆ ಮಾಡಿದ ಹಿಡುವಳಿ ಎಂದು ಅರ್ಥ;

(ಕೆ) "ಖಾಯಂ ಗೇಣಿದಾರ" ಎಂದರೆ ಈ ಅಧಿನಿಯಮದ ಮೇರೆಗೆ ಕೃಷಿಯ ಉದ್ದೇಶಗಳಿಗಾಗಿ ಬಳಸಿದ ಯಾವುದೇ ಭೂಮಿಯ ಸಂಬಂಧದಲ್ಲಿ ಗೇಣಿದಾರಿಕೆಗೆ ಹಕ್ಕುಳ್ಳವನಾಗಿರುವ ವ್ಯಕ್ತಿಯಾಗಿದ್ದು, ಆತನ ಗೇಣಿ ಅವಧಿಯು ಇನಾಮುದಾರನ ಕಾಲಾವಧಿಯೊಂದಿಗೆ ಸಹವ್ಯಾಪ್ತವಾಗಿರುತ್ತದೆ, ಆದರೆ, ಇನಾಮುದಾರನು ಧಾರ್ಮಿಕ ಆರಾಧನೆಯ ಸಂಸ್ಥೆಯಾಗಿರುವಲ್ಲಿ, ಪೂಜಾರಿ, ಅರ್ಚಕ, ಮುಲ್ಲಾ, ಖಾಜಿ, ಮುತಾವಲ್ಲಿ, ಮುತ್ಸದ್ದಿ, ಪಾದ್ರಿಯಾಗಿ ಆ ಸಂಸ್ಥೆಯಲ್ಲಿ ಧಾರ್ಮಿಕ ಸೇವೆ ಸಲ್ಲಿಸುತ್ತಿರುವ ಅಥವಾ ಅದನ್ನು ನಿರ್ವಹಿಸಿಕೊಂಡು ಬರುತ್ತಿರುವ ವ್ಯಕ್ತಿ ಅಥವಾ ಯಾವುದೇ ಹೆಸರಿನಿಂದ ಕರೆಯಲ್ಪಡುವ ಅದೇ ರೀತಿಯ ಅಧಿಕಾರ ಸ್ಥಾನ ಹೊಂದಿರುವ ಅಥವಾ ಯಾವುದೇ ಅಂಥ ಸಂಸ್ಥೆಯಲ್ಲಿ ಯಾವುದೇ ಸೇವೆಯನ್ನು ಸಲ್ಲಿಸುತ್ತಿದ್ದು ಅಂಥ ಜಮೀನಿನ ಸಂಬಂಧದಲ್ಲಿ ಆ ಸಂಸ್ಥೆಗೆ ಅಂಥ ಹಣದ ರೂಪದಲ್ಲಿ ಅಥವಾ ಯಾವುದೇ ವಿಧದಲ್ಲಿ ಗೇಣಿಯನ್ನು ಸಂದಾಯ ಮಾಡದೆಯೇ ಅಂಥ ಸಂಸ್ಥೆಯ ಇನಾಮಿನಲ್ಲಿ ಒಳಗೊಂಡಿರುವ ಯಾವುದೇ ಜಮೀನಿನ ಪ್ರಯೋಜನವನ್ನು ಅನುಭವಿಸುತ್ತಿರುವ ವ್ಯಕ್ತಿಯನ್ನು ಒಳಗೊಳ್ಳತಕ್ಕದ್ದಲ್ಲ;

(ಎಲ್) "ಸಂರಕ್ಷಿತ ಗೇಣಿದಾರ" ಎಂದರೆ ಒಂದು ಇನಾಮಿನಲ್ಲಿ ಒಳಗೊಂಡಿರುವ ಯಾವುದೇ ಭೂಮಿಯನ್ನು ಗೊತ್ತುಪಡಿಸಿದ ದಿನಾಂಕಕ್ಕೆ ಮುಂಚೆ ಹನ್ನೆರಡು ವರ್ಷಗಳಿಗಿಂತ ಕಡಿಮೆಯಲ್ಲದ ಅವಧಿಯವರೆಗೆ ನಿರಂತರವಾಗಿ ಹೊಂದಿದ್ದು ಮತ್ತು ಖುದ್ದಾಗಿ ಸಾಗುವಳಿ ಮಾಡಿದ್ದರೆ, ಅಂಥ ಗೇಣಿದಾರ ಎಂದು ಅರ್ಥ; ಮತ್ತು

[1][ಕರ್ನಾಟಕ][1] ಭೂ ಸುಧಾರಣಾ ಅಧಿನಿಯಮ, 1961 (1962ರ [1][ಕರ್ನಾಟಕ][1] ಅಧಿನಿಯಮ 10) ಜಾರಿಗೆ ಬರುವುದಕ್ಕೂ ಮುಂಚೆ,–

(i) [1][ಬೆಳಗಾವಿ ಪ್ರದೇಶದಲ್ಲಿ][1], ಆ ಪ್ರದೇಶದಲ್ಲಿ ಜಾರಿಯಲ್ಲಿದ್ದಂತೆ ಮುಂಬಯಿ ಗೇಣಿದಾರಿಕೆ ಮತ್ತು ಕೃಷಿ ಜಮೀನುಗಳ ಅಧಿನಿಯಮ, 1948ರ ಮೇರೆಗೆ ಸಂರಕ್ಷಿತ ಗೇಣಿದಾರನೆಂಬುದಾಗಿ ಮಾನ್ಯ ಮಾಡಲಾದ ಒಬ್ಬ ವ್ಯಕ್ತಿಯನ್ನು;

(ii) [1][ಗುಲ್ಬರ್ಗಾ ಪ್ರದೇಶದಲ್ಲಿ][1], ಆ ಪ್ರದೇಶದಲ್ಲಿ ಜಾರಿಯಲ್ಲಿದ್ದಂತೆ ಹೈದರಾಬಾದ್ ಗೇಣಿದಾರಿಕೆ ಮತ್ತು ಕೃಷಿ ಜಮೀನುಗಳ ಅಧಿನಿಯಮ, 1950ರ ಮೇರೆಗೆ ಸಂರಕ್ಷಿತ ಗೇಣಿದಾರನೆಂಬುದಾಗಿ ಭಾವಿಸಲಾಗಿದ್ದ ಒಬ್ಬ ವ್ಯಕ್ತಿಯನ್ನು

– ಒಳಗೊಳ್ಳುತ್ತದೆ.

ಆದರೆ, ಇನಾಮುದಾರನು, ಧಾರ್ಮಿಕ ಆರಾಧನೆಯ ಸಂಸ್ಥೆಯವನಾಗಿರುವಲ್ಲಿ, ಪೂಜಾರಿ, ಅರ್ಚಕ, ಮುಲ್ಲಾ, ಖಾಜಿ, ಮುತಾವಲ್ಲಿ, ಮುತ್ಸದ್ದಿ, ಪಾದ್ರಿಯಾಗಿ ಆ ಸಂಸ್ಥೆಯಲ್ಲಿ ಧಾರ್ಮಿಕ ಸೇವೆ ಸಲ್ಲಿಸುತ್ತಿರುವ ಅಥವಾ ಅದನ್ನು ನಿರ್ವಹಿಸಿಕೊಂಡು ಬರುತ್ತಿರುವ ವ್ಯಕ್ತಿ ಅಥವಾ ಯಾವುದೇ ಹೆಸರಿನಿಂದ ಕರೆಯಲ್ಪಡುವ ಅದೇ ರೀತಿಯ ಅಧಿಕಾರ ಸ್ಥಾನ ಹೊಂದಿರುವ ಅಥವಾ ಯಾವುದೇ ಅಂಥ ಸಂಸ್ಥೆಯಲ್ಲಿ ಯಾವುದೇ ಸೇವೆಯನ್ನು ಸಲ್ಲಿಸುತ್ತಿದ್ದ ಅಂಥ ಜಮೀನಿನ ಸಂಬಂಧದಲ್ಲಿ ಆ ಸಂಸ್ಥೆಗೆ ಹಣದ ರೂಪದಲ್ಲಿ ಅಥವಾ ಯಾವುದೇ ಅಂಥ ವಿಧದಲ್ಲಿ ಗೇಣಿಯನ್ನು ಸಂದಾಯ ಮಾಡದೆಯೇ, ಅಂಥ ಸಂಸ್ಥೆಯ ಇನಾಮಿನಲ್ಲಿ ಒಳಗೊಂಡಿರುವ ಯಾವುದೇ ಜಮೀನಿನ ಪ್ರಯೋಜನವನ್ನು ಅನುಭವಿಸುತ್ತಿರುವ ವ್ಯಕ್ತಿಯನ್ನು ಒಳಗೊಳ್ಳತಕ್ಕದ್ದಲ್ಲ.

1. 1976ರ ಅಧಿನಿಯಮ ಸಂಖ್ಯೆ 53ರ ಮೇರೆಗೆ 18.8.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**ವಿವರಣೆ.–** (1) ಈ ಖಂಡದ ಮೇರೆಗೆ ಹನ್ನೆರಡು ವರ್ಷಗಳ ಅವಧಿಯನ್ನು ಲೆಕ್ಕ ಮಾಡುವಲ್ಲಿ ಗೇಣಿದಾರನು ವಾರಸುದಾರನಾಗಿ ಅಥವಾ ಅವನ ಉತ್ತರಾಧಿಕಾರಿಯಾಗಿ ಬೇರೊಬ್ಬ ವ್ಯಕ್ತಿಯಿಂದ ಜಮೀನನ್ನು ಹೊಂದಿದವನಾಗಿದ್ದರೆ ಅಥವಾ ಆತನು ಗೇಣಿದಾರನಾಗಿ ಅಂಥ ಜಮೀನನ್ನು ಹೊಂದಿದ್ದು ಮತ್ತು ಅಂಥ ವ್ಯಕ್ತಿಗೆ ವಾರಸುದಾರನಾಗಿದ್ದರೆ, ಅಂಥ ಇತರ ವ್ಯಕ್ತಿಯು ಗೇಣಿದಾರನಾಗಿ ಅಂಥ ಜಮೀನನ್ನು ಹೊಂದಿದ ಕಾಲಾವಧಿಯನ್ನು ಸೇರಿಸತಕ್ಕದ್ದು.

(2) ಈ ಖಂಡದ ಮೇರೆಗೆ ಹನ್ನೆರಡು ವರ್ಷಗಳ ಅವಧಿಯನ್ನು ಲೆಕ್ಕ ಮಾಡುವಲ್ಲಿ, ಜಮೀನನ್ನು ಹೊಂದಿರುವ ಗೇಣಿದಾರನು ತಾನು ಖುದ್ದಾಗಿ ಸಾಗುವಳಿ ಮಾಡುತ್ತಿದ್ದ ಅದೇ ಗ್ರಾಮದಲ್ಲಿನ ಯಾವುದೇ ಇತರ ಜಮೀನನ್ನು ಅದೇ ಭೂ ಮಾಲೀಕನಿಂದ ಗೊತ್ತುಪಡಿಸಿದ ದಿನಾಂಕಕ್ಕೆ ಮುಂಚಿನ ಹನ್ನೆರಡು ವರ್ಷಗಳೊಳಗಿನ ಯಾವುದೇ ಕಾಲದಲ್ಲಿ ಗೇಣಿದಾರನಾಗಿ ಅದನ್ನು ಹೊಂದಿದ್ದರೆ, ಆತನು ಅಂಥ ಇತರ ಜಮೀನನ್ನು ಹೊಂದಿದ್ದ ಕಾಲಾವಧಿಯನ್ನು ಸೇರಿಸತಕ್ಕದ್ದು;

(3) ಇಬ್ಬರು ಅಥವಾ ಹೆಚ್ಚಿನ ವ್ಯಕ್ತಿಗಳು ಜಂಟಿಯಾಗಿ ಯಾವುದೇ ಜಮೀನನ್ನು ಗೇಣಿದಾರರಾಗಿ ಹೊಂದಿರುವಲ್ಲಿ, ಅಂಥ ಎಲ್ಲ ವ್ಯಕ್ತಿಗಳನ್ನು, ಅವರಲ್ಲಿ ಯಾರಾದರೊಬ್ಬನು ಸ್ವತಃ ಅಂಥ ಜಮೀನನ್ನು ಸಾಗುವಳಿ ಮಾಡುತ್ತಿದ್ದು ಮತ್ತು ಸಾಗುವಳಿ ಮಾಡುವುದನ್ನು ಮುಂದುವರಿಸಿದ್ದರೆ, ಅಂಥ ಜಮೀನಿನ ಸಂಬಂಧದಲ್ಲಿ ಸಂರಕ್ಷಿತ ಗೇಣಿದಾರರು ಎಂಬುದಾಗಿ ಭಾವಿಸತಕ್ಕದ್ದು;

(4) ಗೇಣಿದಾರನು, ಯಾವುದೇ ತಾತ್ಕಾಲಿಕ ಅಸಮರ್ಥತೆಯ ಕಾರಣದಿಂದ ಜಮೀನನ್ನು ಒಳ ಗೇಣಿಗೆ ನೀಡಿದ್ದರೆ, ಸಂರಕ್ಷಿತ ಗೇಣಿದಾರನ ಹಕ್ಕುಗಳನ್ನು ಅವನು ಪಡೆದುಕೊಳ್ಳುವ ಉದ್ದೇಶಕ್ಕಾಗಿ, ಒಳಗೇಣಿಯ ಅವಧಿಯಲ್ಲಿ ಅದರ ಸ್ವಾಧೀನದಲ್ಲಿ ಮುಂದುವರೆದಿರುವವನಾಗಿ ಮತ್ತು ಸ್ವತಃ ಸಾಗುವಳಿ ಮಾಡುತ್ತಿರುವುದಾಗಿ ಭಾವಿಸತಕ್ಕದ್ದು;

(ಎಂ) "ಗೊತ್ತುಪಡಿಸಲಾದುದು" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ಗೊತ್ತುಪಡಿಸಲಾದುದು ಎಂದು ಅರ್ಥ;

(ಎನ್) "ಧಾರ್ಮಿಕ ಅಥವಾ ಧರ್ಮಾರ್ಥ ಇನಾಮು" ಎಂದರೆ ಧಾರ್ಮಿಕ ಅಥವಾ ಧರ್ಮಾರ್ಥ ಸಂಸ್ಥೆಗೆ ಅಥವಾ ಅದರ ಪ್ರಯೋಜನಕ್ಕಾಗಿ ನೀಡಿರುವ ಗ್ರಾಮ, ಗ್ರಾಮದ ಭಾಗ ಅಥವಾ ಭೂ ಕಂದಾಯದ ಸಂದಾಯದಿಂದ ಪೂರ್ಣ ಅಥವಾ ಭಾಗಶಃ ವಿನಾಯಿತಿ ಪಡೆದ ಭೂಮಿ, ಮತ್ತು,–

(i) ಭೂ ಕಂದಾಯಕ್ಕೆ ಸಂಬಂಧಿಸಿದಂತೆ [1][ಬೆಳಗಾವಿ ಪ್ರದೇಶದಲ್ಲಿ][1] ಕಾನೂನಿನ ಮೇರೆಗೆ ಇಟ್ಟುಕೊಂಡು ಬಂದಿರುವ ಪರಭಾರೆ ರಿಜಿಸ್ಟರಿನಲ್ಲಿ ಅಥವಾ ಇನಾಮು ರಿಜಿಸ್ಟರಿನಲ್ಲಿ; ಮತ್ತು

(ii) ಹೈದರಾಬಾದ್ ದತ್ತಿ ವಿನಿಯಮನ, 1958ರ ಫಸಲಿ ಮೇರೆಗೆ [1][ಗುಲ್ಬರ್ಗಾ ಪ್ರದೇಶದಲ್ಲಿ][1] ಇಟ್ಟುಕೊಂಡು ಬಂದಿರುವ ದತ್ತಿಗಳ ಪುಸ್ತಕದಲ್ಲಿ ಅಥವಾ ಭೂ ದಾಖಲೆಗಳಲ್ಲಿ ಧಾರ್ಮಿಕ ಅಥವಾ ಧರ್ಮಾರ್ಥ ಇನಾಮುಗಳೆಂದು (ಯಾವುದೇ ಹೆಸರಿನಿಂದ ಕರೆಯಲಾಗುತ್ತಿದ್ದಾಗ್ಯೂ) ದಾಖಲಾಗಿರುವಂಥವು.

1.1976ರ ಅಧಿನಿಯಮ ಸಂಖ್ಯೆ 53ರ ಮೇರೆಗೆ 18.8.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**ವಿವರಣೆ.–** ಯಾವುದೇ ಅನುದಾನವು ಧಾರ್ಮಿಕ ಅಥವಾ ಧರ್ಮಾರ್ಥ ಇನಾಮು ಆಗಿದೆಯೆ ಎಂಬ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಅದನ್ನು ರಾಜ್ಯಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ರಾಜ್ಯ ಸರ್ಕಾರದ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(2) ಈ ಅಧಿನಿಯಮದಲ್ಲಿ ಬಳಸಿರುವ ಆದರೆ, ಪರಿಭಾಷಿಸಿರದ, ಪದಗಳು ಮತ್ತು ಅಭಿವ್ಯಕ್ತಿಗಳು, ಅಧಿನಿಯಮ ಅಥವಾ [1][ಕರ್ನಾಟಕ][1] ಭೂ ಸುಧಾರಣಾ ಅಧಿನಿಯಮ, 1961 (1962ರ [1][ಕರ್ನಾಟಕ][1] ಅಧಿನಿಯಮ 10) ರಲ್ಲಿ ಅವುಗಳಿಗೆ ನೀಡಿರುವ ಅರ್ಥಗಳನ್ನೇ ಹೊಂದಿರತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 53ರ ಮೇರೆಗೆ 18.8.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ II

## ರಾಜ್ಯದಲ್ಲಿನ ಇನಾಮುಗಳ ರದ್ದಿಯಾತಿ ಮತ್ತು ನಿಹಿತಗೊಳಿಸುವಿಕೆ ಮತ್ತು ಅದರ ಪರಿಣಾಮಗಳು

**3. ಇನಾಮುಗಳ ರದ್ದಿಯಾತಿ, ನಿಹಿತಗೊಳಿಸುವಿಕೆ ಮತ್ತು ಅದರ ಪರಿಣಾಮಗಳು.–** (1) ಯಾವುದೇ ಕರಾರು, ಅನುದಾನ ಅಥವಾ ಇತರ ಲಿಖಿತದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಗೊತ್ತುಪಡಿಸಿದ ದಿನಾಂಕದಿಂದ ಮತ್ತು ದಿನಾಂಕದಂದು ರಾಜ್ಯದ [1][ಬೆಳಗಾವಿ ಮತ್ತು ಗುಲ್ಬರ್ಗಾ ಪ್ರದೇಶ][1]ಗಳಲ್ಲಿರುವ ಎಲ್ಲಾ ಧಾರ್ಮಿಕ ಅಥವಾ ಧರ್ಮಾರ್ಥ ಇನಾಮುಗಳು ರದ್ದುಗೊಳ್ಳತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 53ರ ಮೇರೆಗೆ 18.8.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಈ ಅಧಿನಿಯಮದಲ್ಲಿ ಅನ್ಯಥಾ ವ್ಯಕ್ತವಾಗಿ ಉಪಬಂಧಿಸಿದುದನ್ನು ಹೊರತುಪಡಿಸಿ, ಗೊತ್ತುಪಡಿಸಿದ ದಿನಾಂಕದಿಂದ ಮತ್ತು ದಿನಾಂಕದಂದು, ಈ ಮುಂದಿನ ಪರಿಣಾಮಗಳು ಅನಂತರ ಉಂಟಾಗತಕ್ಕದ್ದು, ಅಂದರೆ:–

(ಎ) ಇನಾಮುಗಳಿಗೆ ಅಥವಾ ಪರಭಾರೆ ಮಾಡಿದ ಹಿಡುವಳಿಗೆ ಸಂಬಂಧಿಸಿದಂತೆ, ಅಧಿನಿಯಮದ ಉಪಬಂಧಗಳನ್ನು, ಇನಾಮು ಅಥವಾ ಪರಭಾರೆ ಮಾಡಿದ ಹಿಡುವಳಿಗೆ ಅವು ಅನ್ವಯಿಸುವುದನ್ನು ನಿರಸಿತಗೊಳಿಸಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಪರಭಾರೆ ಮಾಡದ ಗ್ರಾಮಗಳಿಗೆ ಅಥವಾ ಜಮೀನುಗಳಿಗೆ ಈ ಅಧಿನಿಯಮದ ಉಪಬಂಧಗಳು ಮತ್ತು ಎಲ್ಲ ಇತರ ಅಧಿನಿಯಮಿತಿಗಳು ಸದರಿ ಇನಾಮಿಗೆ ಅಥವಾ ಪರಭಾರೆ ಮಾಡಿದ ಹಿಡುವಳಿಗೆ ಅನ್ವಯವಾಗತಕ್ಕದ್ದು;

(ಬಿ) ಮೌಲ್ಯಮಾಪನ ಮಾಡಿದ ಅಥವಾ ಮಾಡಿರದ ಎಲ್ಲ ಅಂತಹ ಸಮುದಾಯ ಜಮೀನುಗಳು, ಸಾಗುವಳಿ ಮಾಡಿದ ಜಮೀನುಗಳು, ಸಾಗುವಳಿ ಮಾಡದ ಜಮೀನುಗಳು ಸೇರಿದಂತೆ ಬಂಜರು ಭೂಮಿಗಳು, ಗೋಮಾಳ ಜಮೀನುಗಳು, ಅರಣ್ಯಗಳು, ಗಣಿಗಳು ಮತ್ತು ಖನಿಜಗಳು, ಕಲ್ಲುಗಣಿಗಳು, ನದಿಗಳು ಮತ್ತು ಹಳ್ಳಗಳು, ಕೆರೆಗಳು ಮತ್ತು ನೀರಾವರಿ ಕಾಮಗಾರಿಗಳು, ಮೀನುಗಾರಿಕೆಗಳು ಮತ್ತು ಹಾಯಿದೋಣಿಗಳಿಗೆ ಸಂಬಂಧಿಸಿದಂತೆ ಇನಾಮುದಾರನಲ್ಲಿ ನಿಹಿತವಾಗಿರುವ ಎಲ್ಲ ಅಧಿಕಾರಗಳು, ಹಕ್ಕು ಮತ್ತು ಹಿತಾಸಕ್ತಿಯು ನಿಂತುಹೋಗತಕ್ಕದ್ದು ಮತ್ತು ಎಲ್ಲ ಋಣಭಾರಗಳಿಂದ ಮುಕ್ತವಾಗಿ ರಾಜ್ಯಸರ್ಕಾರದಲ್ಲಿ ಸಂಪೂರ್ಣವಾಗಿ ನಿಹಿತವಾಗತಕ್ಕದ್ದು;

(ಸಿ) ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅದರ ಮೇರೆಗೆ ಸ್ಪಷ್ಟವಾಗಿ ಉಳಿಸಿರುವ ಹಿತಾಸಕ್ತಿಗಳ ಹೊರತು ಇನಾಮಿನಲ್ಲಿ ಯಾವುದೇ ಹಿತಾಸಕ್ತಿಯನ್ನು ಇನಾಮುದಾರನು ಹೊಂದಿರುವುದು ನಿಂತುಹೋಗತಕ್ಕದ್ದು;

(ಡಿ) ಗೊತ್ತುಪಡಿಸಿದ ದಿನಾಂಕದಂದು ಅಥವಾ ತರುವಾಯ ಅಂಥ ಇನಾಮಿನಲ್ಲಿ ಒಳಗೊಂಡ ಜಮೀನುಗಳಿಗೆ ಸಂಬಂಧಿಸಿದಂತೆ ಪ್ರಾಪ್ತವಾಗುವ ಉಪಕರಗಳು ಮತ್ತು ರಾಜಧನವೂ ಸೇರಿದಂತೆ ಎಲ್ಲ ಗೇಣಿಗಳನ್ನು ಮತ್ತು ಭೂ

